# ಅಗ್ನಿಕನ್ಯೆ

( ಒಂಭತ್ತು ಕಥೆಗಳು )

ಅ. ನ. ಕೃಷ್ಣರಾಯ

ಶಿವಮೊಗ್ಗಾ ಪ್ರಿಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿ ಲಿಮಿಟೆಡ್
ಶಿವಮೊಗ್ಗೆ

ಬೆಲೆ ರೂ. ೨—೦—೦

# ಮುನ್ನುಡಿ

ನನ್ನ “ಕಣ್ಣು ಮುಚ್ಚಾಲೆ” (೧೯೪೫) ಪ್ರಕಟವಾದ ಮೇಲೆ ನಾನು ಕಥೆ ಬರೆದುದೂ, ಪ್ರಕಟಿಸಿದುದೂ ಈಗಲೇ. ಇವುಗಳ ರಚನೆಯ ಕಾಲ ಎರಡು ವಾರ. ಆದರೆ ಕೆಲವು ಕಥೆಗಳ ವಸ್ತುಗಳು ನನ್ನ ಮನಸ್ಸಿನಲ್ಲಿ ಸ್ಫುರಿಸಿ ಹಲವು ವರ್ಷಗಳಾಗಿವೆ. ನನ್ನ ಮನಸ್ಸನ್ನು ವಿಶೇಷವಾಗಿ ಆವರಿಸಿದ ತಾತ್ಕಾಲಿಕ ಸಮಸ್ಯೆಗಳನ್ನೂ ಕೆಲವು ಕಥೆಗಳಲ್ಲಿ ರೂಪಿಸಲು ಪ್ರಯತ್ನಿಸಿದ್ದೇನೆ.

ಕನ್ನಡದಲ್ಲಿ ಕಥನಕಲೆ ಇಂದು ತನ್ನ ಕಲಾರೂಪವನ್ನು ಕಳೆದುಕೊಳ್ಳುತ್ತಿದೆ. ಸಂಖ್ಯೆಗೆ ಕೊರತೆಯಿಲ್ಲ, ಆದರೆ ಗುಣಕ್ಕೆ ತುಂಬ ಕೊರತೆ ಬಂದಿದೆ. ತಂತ್ರನೈಪುಣ್ಯ, ಭಾಷಾಸಿದ್ಧಿ, ಭಾವ, ವಿಚಾರಗಳ ಪರಿಪಾಕ ಸುಧಾರಿಸುವುದಂತಿರಲಿ-ಇದ್ದಂತೆಯೂ ಇಲ್ಲವೆಂದು ವಿಷಾದದಿಂದ ಒಪ್ಪಿಕೊಳ್ಳಬೇಕಾಗಿದೆ. ಸ್ವತಃಸಿದ್ಧವಾದ ಕಾರಣಗಳನ್ನು ಕೆದಕಿ ಪ್ರಯೋಜನವಿಲ್ಲ. ಚೆಲ್ಲಿಹೋದ ಹಾಲನ್ನು ನೆನೆದು ಉಪಯೋಗವಿಲ್ಲ. ಕನ್ನಡದಲ್ಲಿ ಒಂದು ಕಾಲಕ್ಕೆ ಉನ್ನತಾವಸ್ಥೆಗೇರಿದ ಕಲೆಯನ್ನು ಉಳಿಸಿಕೊಳ್ಳಬೇಕಾದುದೂ, ಬೆಳಸಿಕೊಳ್ಳಬೇಕಾದುದೂ ಕನ್ನಡ ಸಾಹಿತಿಗಳ ಕರ್ತವ್ಯ. ವ್ಯಾಪ್ತಿ ಬೆಳೆದಂತೆ ಯೋಗ್ಯತೆಯೂ ಬೆಳೆಯಬೇಕು.

'ಅಗ್ನಿಕನ್ಯೆ' ಯಲ್ಲಿ ಬಂದಿರುವ ಕಥೆಗಳಲ್ಲಿ ವ್ಯಾಪ್ತಿ, ಯೋಗ್ಯತೆ, ವಿಷಯ ವೈವಿಧ್ಯಗಳನ್ನು ಲಕ್ಷ್ಯದಲ್ಲಿಟ್ಟುಕೊಂಡದ್ದಾಗಿದೆ. ಲೇಖಕನ ಆಸೆ, ಗುರಿ ಸಾಧಿಸಿದೆಯೇ ಇಲ್ಲವೇ ಎನ್ನುವುದನ್ನು ನಿಶ್ಚಯಿಸುವುದು ಓದುಗರಿಗೆ ಸೇರಿದ ಕರ್ತವ್ಯಭಾಗ.

ನಮ್ಮ ದೇಶದ ಬೃಹತ್ಸಮಸ್ಯೆಯಾಗಿರುವ 'ಪಾಕಿಸ್ತಾನ್' ಪ್ರಶ್ನೆಯನ್ನು ಎರಡು ಕಥೆಗಳಲ್ಲಿ ವಿವೇಚಿಸಿದ್ದೇನೆ. ಆ ಬಗ್ಗೆ ನನ್ನ ಅಭಿಪ್ರಾಯವನ್ನು ಖಚಿತವಾಗಿ ತಿಳಿಸಿಯೂ ಇದ್ದೇನೆ. ಸತ್ಯ ಒಣ ಉಪಚಾರ, ಉಪಶಮನಗಳಿಗೆ ದಕ್ಕುವ ವಸ್ತುವಲ್ಲ. ಅದು ವಜ್ರದಂತೆ ಕಠಿಣ. ಬೆಂಕಿಯಂತೆ ಉಗ್ರ. ನನ್ನ ಕಥೆಗಳಿಂದ ಓದುಗರಿಗೆ ವಿಲಾಸ, ವಿಹಾರಗಳು ದೊರೆಯುತ್ತವೆಂದು ಹೇಳುವಷ್ಟು ಮೂರ್ಖನಲ್ಲ ನಾನು. ಆದರೆ ವಿಕಾಸವೇ ವಿಹಾರವೆಂದು ಭಾವಿಸುವವರಿಗೆ ನನ್ನ ಕಥೆಗಳಿಂದ ನಿರಾಶೆಯಾಗುವುದಿಲ್ಲ. ಓದುಗರಲ್ಲಿ ಸಹನೆ, ಸೌಹಾರ್ದವಿದ್ದರೆ ನನ್ನ ಕಥೆಗಳ ಮರ್ಮ ಅವರಿಗೆ ಅರ್ಥವಾಗದೆ ಇರುವುದಿಲ್ಲ.

ಲೈಂಗಿಕ ವಿಷಯಗಳ ಬಗ್ಗೆ ಮುಚ್ಚುಮರೆ ತೋರಿಸಿ ಜನರ ಅಜ್ಞಾನದ ದುರುಪಯೋಗ ಮಾಡಿಕೊಳ್ಳುವುದು ದೌರ್ಜನ್ಯವೆಂದು ನನ್ನ ಮತ. ನನ್ನ ಹಿಂದಿನ ಸಂಗ್ರಹಗಳಲ್ಲಿ ಬಂದಿರುವ ಕೆಲವು ಕಥೆಗಳಲ್ಲಿ ಲೈಂಗಿಕ ಮನೋಭಾವವನ್ನು ಪೃಥಕ್ಕರಿಸಿದಂತೆ, ಈ ಸಂಗ್ರಹದ ಒಂದೆರಡು ಕಥೆಗಳಲ್ಲಿ ವಿಕೃತಕಾಮವನ್ನು ಪೃಥಕ್ಕರಿಸಿದ್ದೇನೆ. ರೋಗನಿವಾರಣೆಗೆ ರಾಜಮಾರ್ಗದಕ್ಷ ರೋಗನಿಧಾನವೂ ಆಗಿದೆ. ವಿಕೃತಕಾಮ, ಲೈಂಗಿಕ ಅನಾಚಾರ ನಮ್ಮಲ್ಲಿಲ್ಲವೆಂದು ಕಣ್ಣು ಮುಚ್ಚಿ ಕೂಡುವುದಕ್ಕಿಂತ ಅವುಗಳ ಇರುವಿಕೆಯನ್ನು ಗೊತ್ತುಹಚ್ಚಿ ಶುದ್ಧೀಕರಿಸುವುದು ಒಳ್ಳೆಯದು.

ಕಲಾವಿದ ತನ್ನ ದಂತದರಮನೆಯಲ್ಲಿ ವಿಲಾಸಜೀವನ ನಡಸುವ ವಿಷಯಿಯಲ್ಲ. ಅವನ ಬಾಳು ಜನತೆಯ ಬಾಳಿನೊಂದಿಗೆ, ನೋವು ನಲವುಗಳೊಂದಿಗೆ ಹಾಸುಹೊಕ್ಕಾಗಿ ಹೊಂದಿಕೊಳ್ಳಬೇಕೆಂಬ ವಾದವನ್ನು ನಾನು—ಬಹು ಮಂದಿ ಸೋದರ ಸಾಹಿತಿಗಳಿಗೆ ಅಪ್ರಿಯವಾದರೂ—ಮಂಡಿಸುತ್ತ ಬಂದಿದ್ದೇನೆ. ಆಚರಿಸುತ್ತಲೂ ಇದ್ದೇನೆ ನನ್ನ ಶಕ್ತ್ಯಾನುಸಾರ. ಅಗ್ನಿಕನ್ಯೆಯಲ್ಲಿಯೂ ಆ ಸಾಧನದ ರೀತಿ ಓದುಗರಿಗೆ ಕಾಣಬರುತ್ತದೆ.

ಈ ಸಂಗ್ರಹ ರೂಪಗೊಳ್ಳುವುದಕ್ಕೆ ನೆರವಾದವರು ಶಿವಮೊಗ್ಗಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿಯ ಮ್ಯಾನೇಜಿಂಗ್ ಡೈರೆಕ್ಟರವರಾದ ಶ್ರೀ ಕೆ. ಎಸ್. ರಾಮಕೃಷ್ಣಮೂರ್ತಿಯವರು. ಅವರ ಉತ್ಸಾಹ, ಒತ್ತಡಗಳೆರಡೂ ಕಾರಣವಾದುವು ಇದರ ಪ್ರಕಟನೆಗೆ.

ಕನ್ನಡ ಗ್ರಂಥಗಳನ್ನು ಪ್ರಕಟಿಸುವ ಸಂಸ್ಥೆಗಳು ಬೆಳೆಯಬೇಕು. ಶಿವಮೊಗ್ಗೆಯ ಕನ್ನಡ ಅಭಿಮಾನಿಗಳ ಪ್ರಯತ್ನಕ್ಕೆ ಎಲ್ಲ ಕನ್ನಡಿಗರ ನೆರವು ದೊರೆಯಲೆಂದು ನನ್ನ ಆಶಯ.

ನನ್ನ ಸಾಹಿತ್ಯ ಕೃತಿಗಳ ಬಗ್ಗೆ ಸದಾ ಅಭಿಮಾನ ತಳೆದು ನನ್ನ ಪ್ರಯತ್ನಗಳನ್ನು ಹರಸುತ್ತ ಬಂದಿರುವ ಪ್ರಗತಿಶೀಲ ಸಾಹಿತ್ಯ ಗೆಳೆಯರಿಗೆ ನನ್ನ ವಂದನೆಗಳನ್ನು ಸಲ್ಲಿಸದಿರಲಾರೆ.

ಕಲಾಭಿಮಾನಿಗಳಾದ ಈಸ್ಟರ್ನ್ ಪ್ರೆಸ್ ಒಡೆಯರು ಶ್ರೀ ಎಂ.ಎಸ್. ಚಿಂತಾಮಣಿ ಗ್ರಂಥವನ್ನು ಮುದ್ದಾಗಿ ಅಚ್ಚುಮಾಡಿಕೊಟ್ಟಿದ್ದಾರೆ. ಅವರ ಉಪಕಾರಕ್ಕೆ ನಾನು ಋಣಿ.

"ಅನ್ನಪೂರ್ಣ" ವಿಶ್ವೇಶ್ವರಪುರಂ
ಬೆಂಗಳೂರು ನಗರ
೧೪–೧–೧೯೪೭

ಅ. ನ. ಕೃಷ್ಣರಾಯ

# ಪರಿವಿಡಿ





# ಅನ್ನದ ಕೂಗು

ನನ್ನೆದುರಿಗೆ ಒಬ್ಬ ಮಿಲ್ಟ್ರಿ ಆಫೀಸರ್ ಬಂದು ನಿಂತ. ಕಾಕಿ ಸರ್ಜ್ ಸೂಟ್, ತಲೆಯ ಮೇಲೆ ಮಿಲ್ಟ್ರಿ ಹ್ಯಾಟ್, ಮೈಮೇಲೆ ತೊಗಲಿನ ಪಟ್ಟಿ – ಅಲಂಕಾರ ಪೂರ್ಣವಾಗಿತ್ತು. ಆಫೀಸರ್ ಬಂದವನೇ ನನ್ನ ಹೆಗಲಿನ ಮೇಲೆ ಬಲವಾದ ಪೆಟ್ಟುಕೊಟ್ಟ. ಕತ್ತೆತ್ತಿ ನೋಡಿದೆ. ಅವನೇ ನಮ್ಮ ಸೋಮಸುಂದರೂ.

"ಯಾವಾಗಯ್ಯಾ ಬಂದೆ?"

"ಮೂರು ದಿವಸವಾಯ್ತು."

"ಮೂರು ದಿವಸವಾದರೂ ಇತ್ತ ಬರುವುದಕ್ಕಾಗಲಿಲ್ಲವೇ?"

"ಗೂಡು ಹುಡುಕಿಕೊಂಡು, ಅನ್ನದ ವ್ಯವಸ್ಥೆಮಾಡಿಕೊಳ್ಳ ಬೇಕಲ್ಲಪ್ಪಾ."

"ನಿಮಗೇನಯ್ಯಾ ಅನ್ನದ ಕೊರತೆ. ಹಿಂದೆ ಅದೃಷ್ಟವಿದ್ದವರು ಸರ್ವೆ ಇಲಾಖೆ ಸೇರುತ್ತಿದ್ದರಂತೆ – ಈಗ ಮಿಲ್ಟ್ರಿ ಸೇರುತ್ತಾರೆ."

"ನಿಜ ಕಿಟ್ಟೊ. ಆದರೆ ನಾವು ಬಿಳಿಯರಲ್ಲ. ನಾವು ಎಷ್ಟೇ ದೊಡ್ಡ ಅಧಿಕಾರದಲ್ಲಿದ್ದರೂ ಒಬ್ಬ ಬಿಳಿಯ ಟಾಮಿ ಹೇಳಿದ ಹಾಗೆ ಕೇಳಬೇಕಾಗುತ್ತೆ."

"ಆ ಕಥೆ ಹಿಂದಿನಿಂದಾಗಲಿ. ನೀನು ದೇವಲಾಲಿಗೆ ಹೋಗಿ ಎಷ್ಟು ವರ್ಷವಾಯಿತು?"

"ಮೂರು."

"ಮೂರು ವರ್ಷಕ್ಕೆ ನಾಲ್ಕು ಕಾಗದವೇ ಬರೆಯುವುದು?"

"ನನ್ನ ವಿಷಯ ನಿನಗೆ ಗೊತ್ತಿಲ್ಲ. ನಾನು ದೇವಲಾಲಿಯಲ್ಲಿ ಇದ್ದುದು ಒಂದೇ ವರ್ಷ – ಇದ್ದಕ್ಕಿದ್ದಂತೆ ಒಂದು ದಿನ ಇರಾನಿಗೆ ಹೊತ್ತು ಹಾಕಿದರು. ಅಲ್ಲಿ ಒಂದು ವರ್ಷ ಕಳೆದು ದೇವಲಾಲಿಗೆ ಬಂದೆ. ಅನಂತರ ಕರ್ಕಿ. ಮೇಲಧಿಕಾರಿ ಕರುಣೆಯಿಟ್ಟು ಈಗ ಬೆಂಗಳೂರಿಗೆ ವರ್ಗಾಯಿಸಿದ."

"ಇಲ್ಲಿ ಎಷ್ಟು ದಿವಸ?"

"ಅದು ಗೊತ್ತಿಲ್ಲ. ಯಾವ ಹೊತ್ತಿನಲ್ಲಿ ಎಲ್ಲಿಗೆ ಹಾಕುತ್ತಾರೋ ಯಾರಿಗೂ ತಿಳಿಯದು."

"ಈಗ ವಾಸ?"

"ಕಂಟೋನ್ಮೆಂಟಿನಲ್ಲಿ ರೂಮ್ ಮಾಡಿಕೊಂಡಿದ್ದೇನೆ. ಹತ್ತಿರದಲ್ಲಿ ಒಬ್ಬ ಪಾಲಘಾಟ್ ಅಯ್ಯರ್ ಹೋಟೆಲ್ ಇದೆ. ಅಲ್ಲಿ ಊಟ."

"ಊಟ ತಿಂಡಿ ಅನುಕೂಲವಾಗಿದೆಯೇ?"

"ಏನು ಹೇಳಲಿ ಅದರ ವೈಭವ. ಮಿಲ್ಟ್ರಿಯವರು ಸಪ್ಲೈಮಾಡುವ ಡಿ.ಡಿ.ಟಿ ಯೆಲ್ಲಾ ಅಯ್ಯರ್ ಹೊಟೆಲಿಗೇ ಸಾಲದು. ತಿಪ್ಪೆಮೇಲೆ ಕೂತು ತಿಂದು ಬಂದ ಹಾಗಿರುತ್ತೆ."

"ಕಂಟೋನ್ಮೆಂಟ್ ತುಂಬ ಚೈನೀಸ್ ರೆಸ್ಟೂರೆಂಟ್‌ಗಳಿವೆ."

"ಇವೆ. ಆದರೆ ಆ ನಾಲ್ಕು ಕಾಲಿನ, ಎರಡು ಕಾಲಿನ ತರಕಾರಿ ತಿನ್ನೋ ಅಭ್ಯಾಸವಾಗಿಲ್ಲವಲ್ಲಾ ಏನು ಮಾಡಲಿ?"

"ಭಾನುವಾರ ರಜಾ ಇದೆಯೋ ಇಲ್ಲವೋ?"

"ಇದೆ."

"ಎದ್ದ ಕೂಡಲೆ ಬಂದು ಬಿಡು. ಒಪ್ಪತ್ತಾದರೂ ಸರಿಯಾಗಿ ಊಟ ಮಾಡುವೆಯಂತೆ?"

"ಭಾನುವಾರ ಏಕೆ, ಶನಿವಾರ ಸಂಜೆಗೇ ನಾನು ಹಾಜರಾಗುತ್ತೇನೆ."

"ಇನ್ನಾದರೂ ಮದುವೆ ಯೋಚನೆ ಮಾಡುತ್ತೀಯೋ ಹೀಗೇ ಗುಂಡುಗೋವಿಯಾಗಿರುತ್ತೀಯೋ?"

"ಮಿಲ್ಟ್ರಿ ಸೇರಿದರೆ ಕೈತುಂಬ ನಾಲ್ಕುಕಾಸು ಬರತ್ತೆ. ನಾಲ್ಕಾರು ವರ್ಷ ಸೇವೆ ಮುಗಿಸಿ ಮದುವೆಯಾಗೋಣ ಎಂತಿದ್ದೆ."

"ಈಗೇನಾಯಿತು?"

"ಅಲ್ಲಿ ಬರುವುದು ಅಲ್ಲಿಗೇ ಸರಿಹೋಗತ್ತೆ. ಒಂದು ಕೈಯಲ್ಲಿ ದುಡ್ಡು ಕೊಡುತ್ತಾರೆ, ಇನ್ನೊಂದು ಕೈಯಲ್ಲಿ ಅದನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಾರೆ."

"ಮದುವೆಯಾಗೋರೆಲ್ಲಾ ಮಿಲ್ಟ್ರಿ ಸೇರುತ್ತಾರೇನಯ್ಯಾ. ನಿಮ್ಮ ತಾಯಿ ಒಂದೇ ಸಮನೆ ಕಣ್ಣೀರು ಹಾಕುತ್ತಾಳೆ."

"ಆಕೆ ಸಮಾಧಾನ ಮಾಡೋದಿಕ್ಕೆ ದತ್ತುಪುತ್ರ ನಿನ್ನ ಬಿಟ್ಟು ಹೋಗಿದ್ದೀನಲ್ಲಪ್ಪಾ."

"ಉಡಾಫೆ ಮಾತು ಸಾಕು ಸೋಮೂ. ಮುಂದೆ ನೀನು ಹೀಗಿದ್ದರೆ ಚೆನ್ನಾಗಿರುವುದಿಲ್ಲ. ಮುದುಕಿಯನ್ನು ಗೋಳಾಡಿಸುವುದು ನಿನಗೆ ತರವಲ್ಲ."

"ನೋಡು ಕಿಟ್ಟೂ – ಯುದ್ಧ ಮುಗಿಯುತ್ತ ಬಂದಿದೆ. ಇನ್ನು ವರ್ಷ, ಆರು ತಿಂಗಳಲ್ಲಿ ನಮ್ಮನ್ನೆಲ್ಲಾ ಮನೆಗೆ ಕಳಿಸುತ್ತಾರೆ. ಆಗ ಸುಖವಾಗಿ ಮದುವೆ ಮಾಡಿಕೊಂಡು ಸಾಕ್ಷಾತ್ ಶ್ರೀರಾಮಚಂದ್ರನ ಹಾಗೆ ಬಾಳುತ್ತೇನೆ."

"ನಿಮ್ಮಮ್ಮನ ದುಃಖ ನೀನು ಕಾಣೆ."

"ನಾನು ಮದುವೆಯಾಗಲಿಲ್ಲಾಂತ ತಾನೆ"

"ಅದಲ್ಲ. ಮಿಲ್ಟ್ರಿಯಲ್ಲಿ ಯಾರಾದರೂ ದೊರೆಸಾನಿಯನ್ನು ಎಲ್ಲಿ ಕಟ್ಟಿಕೊಂಡು ಬಿಡುತ್ತೀಯೋ ಅನ್ನೋದು ಆಕೆ ಭಯ."

"ಕಿಟ್ಟು, ಮಿಲ್ಟ್ರಿ ಸೇರುವುದಕ್ಕೆ ಮುಂಚೆ ಆ ಹುಚ್ಚು ಇತ್ತು. ಈಗ ದೊರೆಸಾನಿಯರ ವೈವಾಟು ನೋಡಿ ನೋಡಿ ನಾನು ಪಕ್ಕಾ 'ಸ್ವದೇಶಿ'

ಆಗಿಹೋಗಿದ್ದೀನಿ. ನಿಜವಾಗಿಯೂ ಪ್ರಪಂಚದ ಪರಿಚಯ ಪಡೆಯುವುದಕ್ಕೆ ಮಿಲ್ಟ್ರಿ ಸೇರಬೇಕು. ಆಫೀಸರ್ ಮೆಸ್ಸಿನಲ್ಲಿ ಎಲ್ಲಾ ನನ್ನ 'ಅಸೆಟಿಕ್' (ascetic) ಎಂದು ಪರಿಹಾಸ್ಯ ಮಾಡುತ್ತಾರೆ."

"ನೀನು ಹೇಳಿದ್ದು ಕೇಳಿ ನನಗೇ ಎಷ್ಟೋ ಸಂತೋಷವಾಗಿದೆ. ನಿಮ್ಮಮ್ಮ ಹಿಗ್ಗಿಬಿಡುತ್ತಾಳೆ. ಏಳು – ಊಟಮಾಡು"

ಎಂದೆ. ಸೋಮು ಬರಗಾಲದ ಪ್ರದೇಶದಿಂದ ಬಂದ ಪ್ರಾಣಿ ಹಾಗೆ ಕಬಳಿಸಿದ. ಆ ಜೀವದ ಹಸಿವು ನೋಡಿ ನನಗೆ ತುಂಬ ಮರುಕ ಹುಟ್ಟಿತು. ಊಟ ಮುಗಿಸಿದವನೇ ಸೋಮು ಹೊರಡಲಣಿಯಾದ. ಬೆಳಿಗ್ಗೆ ಪೆರೇಡಿಗೆ ಎಲ್ಲಿ ಹೊತ್ತಾಗುತ್ತದೋ ಎಂಬ ಭಯ.

ಸೋಮು ಕಣ್ತುಂಬುವ ಪ್ರಾಣಿ. ಐದು ಅಡಿ ಒಂಭತ್ತಂಗುಲದ ನಿಲವು. ವಿಶಾಲವಾದ ಎದೆ. ತುಂಬಿದ ಕಣ್ಣುಗಳು. ಸದಾ ಸ್ಮಿತಶಾಂತ ವದನ. ಕಾಲೇಜಿನ ಎಲ್ಲ ಆಟಪಾಟಗಳಲ್ಲಿಯೂ ಮುಂದು. ಡಿಗ್ರಿ ಮುಗಿಸಿದವನೇ ವಿನೋದಕ್ಕೆ ಕಿಂಗ್ಸ್ ಕಮೀಷನ್ನಿಗೆ ಅರ್ಜಿ ಕೊಟ್ಟ. ಭೇಟಿಯ ಕರೆ ಬಂತು. ಸೋಮುವಿನ ಭವ್ಯಾಕಾರಕ್ಕೆ ಬೆರಗಾದ ಮಿಲ್ಟ್ರಿ ಅಧಿಕಾರಿಗಳು ಅವನಿಗೊಂದು ಕೆ.ಸಿ. ಕೊಟ್ಟರು. ಕೆಲವು ದಿವಸಗಳಲ್ಲಿಯೇ ಸೋಮು ದೇವಲಾಲಿಗೆ ಹೋಗಬೇಕಾಗಿ ಬಂತು.

ಸೋಮು ಪ್ರತಿ ಶನಿವಾರ ತಪ್ಪದೆ ಬರುತ್ತಿದ್ದ. ಒಂದು ಶನಿವಾರ ನನ್ನನ್ನು ಕರೆದೊಯ್ದು ತನ್ನ ರೂಮ್ ತೋರಿಸಿದ. ಕಮರ್ಷಿಯಲ್ ಸ್ಟ್ರೀಟಿನ ಹಿಂದಿನ ರಸ್ತೆ. ಮೇಲೆ ಒಂದು ವೆರಾಂಡ, ಒಂದು ತೊಟ್ಟಿ, ತೊಟ್ಟಿಯ ಹಿಂದೆ ಎರಡು ಕೋಣೆ. ತೊಟ್ಟಿಯನ್ನು ಸೋಮು 'ದಿವಾನ್ ಖಾನೆ' ಮಾಡಿಕೊಂಡಿದ್ದ. ಹಿಂದಿದ್ದ ಒಂದು ಕೋಣೆ ಅವನ ಮಲಗುವ ಮನೆಯಾಗಿತ್ತು. ಮತ್ತೊಂದು ಕೋಣೆ ಊಟದ ಮನೆಯಾಗಿತ್ತು. ಇವುಗಳ ಹಿಂದೆ ಒಂದು ಸ್ನಾನದ ಮನೆ, ಶೌಚಗೃಹಗಳಿದ್ದವು. ಒಂದು ಸಂಸಾರ ಸುಖವಾಗಿ ವಾಸಮಾಡಬಹುದಾಗಿತ್ತು. ಕ್ಯಾಪ್ಟನ್ ಸೋಮಸುಂದರನಿಗೆ ೮೦ ರೂಪಾಯಿ ಬಾಡಿಗೆ ಹೆಚ್ಚೇನೂ ಆಗಿರಲಿಲ್ಲ.

ಸೋಮು ಮಿಲ್ಟ್ರಿ ಜೀವನದ ಹಲವಾರು ಅನುಭವಗಳನ್ನು ರಸವತ್ತಾಗಿ ಹೇಳುತ್ತಿದ್ದ. ಒಮ್ಮೆ ನಿರಪರಾಧಿಗಳಾದ ಪಠಾಣರ ಮೇಲೆ ಗೋಳೀಬಾರು

ಏನು ಮಾಡಿದರೂ ರಕ್ತಸ್ರಾವ ನಿಲ್ಲಲಿಲ್ಲ. ಅವರು ತೀರಿಹೋದರು. ಭಿಕ್ಷಕ್ಕೆ ಹೊರಟೆವು. ಯಾರಲ್ಲಿ ಬೇಡಬೇಕು ? – ನೀಡುವವರೆಲ್ಲಾ ನಮ್ಮಂತೆಯೇ ನಿರ್ಗತಿಕರು. ಈ ದುಸ್ಥಿತಿ ನೋಡಿ ನಮ್ಮನ್ನು ಇಸ್ಲಾಮಿಗೆ ಸೇರಿಸಬೇಕೆಂದು ಕೆಲವರು ಹವಣಿಸಿದರು. ನಾವು ಅವರ ಕಣ್ಣುತಪ್ಪಿಸಿ, ಕಲ್ಕತ್ತೆಯನ್ನು ಬಿಟ್ಟು ಹೊರಟೆವು. ಅರ್ಧದಾರಿ ನಡೆದವು. ಉಳಿದ ಅರ್ಧ ದಾರಿ ರೈಲಿನಲ್ಲಿ ಬಂದೆವು. ಟಿಕೆಟ್ ಇಲ್ಲದೆ ಪ್ರಯಾಣಮಾಡುತ್ತೀ ವೆಂದು ರೈಲಿನವರು ನಮ್ಮನ್ನು ಇಳಿಸಿಬಿಡುತ್ತಿದ್ದರು. ಅಲ್ಲಿ ಹಾಗೂ ಹೀಗೂ ಕಾಲಹಾಕಿ ಮುಂದಿನ ರೈಲು ಹತ್ತುತ್ತಿದ್ದೆವು. ನಮ್ಮ ವಿಧಿ ಇಲ್ಲಿಗೆ ಕರೆತಂದಿತು. ನಿಮ್ಮ ಮಿತ್ರಮಹಾಶಯರು ನಮ್ಮನ್ನು ವಿಶ್ವಾಸದಿಂದ ಕಂಡು, ಇಲ್ಲಿಗೆ ಕರೆತಂದು ಬಟ್ಟೆ, ಆಹಾರ ಕೊಟ್ಟು ಕಾಪಾಡಿದರು. ಮುಂದಾದರೂ ನಮ್ಮನ್ನು ಕಾಪಾಡುವ ಭಾರ ನಿಮ್ಮದೇ”

ಎಂದು ಹೇಳುತ್ತ ಎದ್ದು ನನ್ನ ಮತ್ತು ಸೋಮುವಿನ ಕಾಲುಮುಟ್ಟಿ ನಮಸ್ಕಾರ ಮಾಡಿದಳು. ಮಕ್ಕಳೂ ತಾಯಿಯನ್ನು ಅನುಸರಿಸಿದವು. ‘ಹಾಳು ಹೊಟ್ಟೆಗಾಗಿ ಇಷ್ಟು ಕಷ್ಟವೇ’ ಎಂದು ಮನಸ್ಸು ಮಮ್ಮಲ ಮರು ಗಿತು. ಸೋಮು ಚಿತ್ರದ ಗೊಂಬೆಯಂತೆ ಕುಳಿತುಬಿಟ್ಟಿದ್ದ.

“ಇವರು ನಿನಗೆ ಹೇಗೆ ಸಿಕ್ಕಿದರು ಸೋಮೂ.”

“ನಾನು ಊಟಮಾಡುವ ಅಯ್ಯರ್ ಹೊಟೆಲ್ ಬಳಿ ಭಿಕ್ಷಕ್ಕೆ ಬಂದಿದ್ದರು. ಅಲ್ಲಿದ್ದ ಕೆಲವು ಮುಸಲರು ಇವರನ್ನು ಕೆಣಕಲೆತ್ನಿಸುತ್ತಿದ್ದರು. ನನ್ನ ಖಾಕಿ ಅರಿವೆ ಕಂಡು ಅವರು ಹೆದರಿ ದೂರವಾದರು. ನಾನು ಇಲ್ಲಿಗೆ ಕರೆತಂದೆ.”

“ನೀವು ಯೋಚನೆ ಮಾಡಬೇಡಿ – ದೇವರು ಕಾಪಾಡುತ್ತಾನೆ”

ಎಂದು ಭರವಸೆಕೊಟ್ಟೆ. ಅವರೆದ್ದು ಒಳಗೆ ಹೋದರು. ಸೋಮು ಏನನ್ನೋ ಯೋಚಿಸುತ್ತ ಕುಳಿತುಬಿಟ್ಟಿದ್ದ. ಸೋಮುವಿನ ಉದಾರಚರಿತೆಯನ್ನು ಕಂಡು ಅವನನ್ನಪ್ಪಿ ಮುದ್ದಿಡಬೇಕೆನಿಸಿತು.

“ಏಕೆ ಸೋಮು – ಬಹಳ ಯೋಚನೆ ಮಾಡುತ್ತಿದ್ದೀ.”,

“ಹಾಳುಹೊಟ್ಟೆ ಮನುಷ್ಯನನ್ನು ಎಲ್ಲಿಗೆ ತರುತ್ತದೆ ಎಂದು ಯೋಚಿಸು ತ್ತಿದ್ದೆ.”

"ನಿಜ-ಹಿಂದೆ ಕ್ಷಾಮಡಾಮರ ಉಂಟುಮಾಡುತ್ತಿದ್ದವನು ದೇವರು- ಈಗ ಮನುಷ್ಯ. ಬಂಗಾಳದ ಕೃತಕಕ್ಷಾಮ ಸಾರ್ವಭೌಮ ಸರ್ಕಾರದ ಕೀರ್ತಿ ಕಳಶ."

"ಈ ಕಥೆಯ ಅತ್ಯಂತ ಕರುಣಾಮಯ ಸನ್ನಿವೇಶ ಇನ್ನೂ ಒಂದಿದೆ ಕಿಟ್ಟೂ....ಹೇಳಲೋ ಬೇಡವೊ ಎಂದು ಯೋಚಿಸುತ್ತಿದ್ದೇನೆ."

"ಅದನ್ನು ಕೇಳಲು ನಾನು ಅರ್ಹನೆಂದು ನೀನು ಭಾವಿಸುವುದಾದರೆ ತಿಳಿಸು."

"ನಿನಗಿಂತ ಅರ್ಹರಾರು ಕಿಟ್ಟೂ....ಈ ಕುಟುಂಬ ಇಲ್ಲಿಗೆ ಬಂದು ಮೂರು ದಿವಸವಾಯಿತು. ಒಬ್ಬರ ಮೈಮೇಲೂ ಒಂದಂಗುಲ ಗಟ್ಟಿ ಅರಿವೆ ಇರಲಿಲ್ಲ. ಅವರನ್ನು ಕೂಡಲೆ ಅಂಗಡಿಗೆ ಕರೆದೊಯ್ದು ಬಟ್ಟೆಬರೆ ಕೊಂಡುಕೊಟ್ಟೆ. ಊಟ ಉಪಚಾರದ ವ್ಯವಸ್ಥೆ ಮಾಡಿದೆ. ನನ್ನ ಕೋಣೆಯನ್ನು ಬಿಟ್ಟುಕೊಟ್ಟು ನಾನು ಇಲ್ಲಿ – ತೊಟ್ಟಿಯಲ್ಲಿ ಮಲಗಿದೆ. ನಿನ್ನೆ ರಾತ್ರಿ ೧೦ ಗಂಟೆಯ ತನಕ ನಾವೆಲ್ಲ ಮಾತನಾಡುತ್ತ ಕುಳಿತಿದ್ದೆವು. ಅವರೂ ಹೋಗಿ ಮಲಗಿದರು. ನಾನೂ ಮಲಗಿದೆ. ನಾನು ಮಲಗಿ ಅರ್ಧಗಂಟೆಯಾಗಿರಬಹುದು. ಪೂರ್ತಿ ಮುಸುಕು ಹಾಕಿಕೊಂಡು ನಾನು ಮಲಗುವ ಅಭ್ಯಾಸ ನಿನಗೆ ತಿಳಿದೇ ಇದೆ. ಯಾರೋ ಮುಸುಕು ಎಳೆದಂತಾಯಿತು. ಗಾಬರಿಯಾಗಿ ಎದ್ದು ಕುಳಿತೆ – ಎದುರಿಗೆ ಸುಷಮಾ....

'ಏನು ಬಂದೆ ಸುಷಮಾ – ಏನಾದರೂ ಬೇಕಾಗಿತ್ತೆ' ಎಂದೆ.

'ಶೂ....ಶಬ್ದ ಮಾಡಬೇಡಿ' ಎಂದಳು.

ನಾನೆದ್ದು ಹಾಸಿಗೆಯ ಮೇಲೆ ಕುಳಿತೆ. ಆಕೆ ಎದುರಿಗೆ ನೆಲದ ಮೇಲೆ ಕುಳಿತಳು. ಮೂರು ನಾಲ್ಕು ನಿಮಿಷ ನಿಶ್ಶಬ್ದವಾಗಿ ಕಳೆದವು. ಗಡಿಯಾರದ ಟಿಕ್-ಟಿಕ್ ಶಬ್ದ – ಅದಕ್ಕಿಂತಲೂ ಬಲವಾಗಿ ನನ್ನ ಹೃದಯದ ಢವ ಢವ ಶಬ್ದ ಎರಡೇ ಆ ನಿಶಿಯ ಮೌನವನ್ನು ಕಲಕಿದ್ದವು.

"ಎಲ್ಲರೂ ಮಲಗಿದರೇ ?"

"ಹೂ" ಎಂದಳು.

"ನಿದ್ರೆ ಬಂತೇ ?"

"ಹೂ...."

"ನೀನೇಕೆ ಮಲಗಲಿಲ್ಲ?"

"ನಿದ್ರೆ ಬರಲಿಲ್ಲ"

"ಮಲಗು ಹೋಗು, ನಿದ್ರೆ ಬರುತ್ತದೆ."

"ತಾಯಿ ಕಳಿಸಿದ್ದಾರೆ...."

"ಏಕೆ?"

"ನಿಮ್ಮ ಜತೆ ಮಲಗಿದ್ದು ಬಾರೆಂದು."

ನನಗೆ ಆ ಮಾತು ಕೇಳಿ ಮೈಮುಖವೆಲ್ಲಾ ಬೆವರಲಾರಂಭಿಸಿತು. ಧೈರ್ಯ ತಂದುಕೊಂಡೆ. ಗದರಿಸಿಕೊಳ್ಳುವಂತೆ

"ಸುಮ್ಮನೆ ಎದ್ದು ಒಳಗೆ ಹೋಗು" ಎಂದೆ.

ಸುಷಮಳ ಕಣ್ಣಲ್ಲಿ ಬಳಬಳ ನೀರು ಸುರಿಯಿತು. ಮರುಮಾತನಾಡದೆ ಎದ್ದು ಒಳಗೆ ಹೋದಳು. ಅವಳು ಹೋದಕೂಡಲೆ ಅವಳ ತಾಯಿ ಎದ್ದು ಬಂದು ನನ್ನ ಕಾಲುಹಿಡಿದು ನಮಸ್ಕಾರ ಮಾಡಿದರು.

"ಕ್ಷಮಿಸಿ – ನಮ್ಮನ್ನು ಕೆಟ್ಟವರೆಂದು ಭಾವಿಸಬೇಡಿ" ಎಂದರು.

ನೆತ್ತಿಗೇರಿದ್ದ ಕೋಪ ನನಗಿನ್ನೂ ಇಳಿದಿರಲಿಲ್ಲ.

"ನಾವು ಕಾಯಸ್ಥರು– ಕುಲೀನರು – ಕೆಟ್ಟವರಲ್ಲ– ಈ ರೀತಿ ಜೀವನ ಮಾಡುವವರಲ್ಲ – ಹಾಗೆ ದಯೆಯಿಟ್ಟು ತಿಳಿಯಬೇಡಿ."

"ಹಾಗಾದರೆ ಸುಷಮಳನ್ನು ಪಾಪದ ಹಾದಿಗೇಕೆ ಹಚ್ಚುತ್ತಿದ್ದಿರಿ?"

"ನೀವು ನಮ್ಮನ್ನು ಕಾಪಾಡಿದಿರಿ – ಅನ್ನ ಬಟ್ಟೆ ಕೊಟ್ಟು ನಮ್ಮನ್ನು ಬದುಕಿಸಿದಿರಿ. ನಿಮ್ಮ ಋಣ ತೀರಲೆಂದು ಸುಷಮಾ...."

ತಡೆದಿದ್ದ ದುಃಖ ನನಗೆ ಉಮ್ಮಳಿಸಿ ಬಂತು. ಆಕೆಯನ್ನು ಸಮಾಧಾನಗೊಳಿಸಿ

"ಹೋಗಿ ತಾಯಿ – ಯೋಚಿಸಬೇಡಿ.... ಮನುಷ್ಯ ಇನ್ನೂ ಅಂತಹ ಪಿಶಾಚಿಯಾಗಿಲ್ಲ" ಎಂದೆ.

ಸೋಮೂ ಕಥೆ ಕೇಳಿ ನಾನು ಅವಾಕ್ಕಾದೆ. ಈ ದೇವತಾಮೂರ್ತಿ ನನ್ನ ಗೆಳೆಯನೇ ಎಂದು ಅನುಮಾನಪಟ್ಟೆ.

"ಕಿಟ್ಟೂ....ನನಗೊಂದು ಉಪಕಾರ ಮಾಡುವೆಯಾ?"

"ಹೇಳು...."

"ನಾಳೆ ಹಳ್ಳಿಗೆ ಹೋಗಿ ನಮ್ಮ ತಾಯಿಯನ್ನು ಕರೆದುಕೊಂಡು ಬರುವೆಯಾ?"

"ಏಕೆ? ಇಷ್ಟು ಅವಸರದಲ್ಲಿ...."

"ನಾನು ಸುಷಮಳನ್ನು ಮದುವೆಯಾಗಲು ನಿಶ್ಚಯಿಸಿದ್ದೇನೆ. ಅಮ್ಮನನ್ನು ಒಪ್ಪಿಸುವ ಭಾರ ನಿನ್ನದು."

"ಮತ್ತೊಮ್ಮೆ ಯೋಚಿಸಿ ನೋಡು ಸೋಮೂ....ಇದು ಬಹಳ ಮಹತ್ವದ ವಿಷಯ."

"ಸಾಕಷ್ಟು ಯೋಚಿಸಿದ್ದಾಗಿದೆ. ನಾನು ಲಗ್ನವಾಗುವುದಾದರೆ ಸುಷಮಳನ್ನೇ!"

"ಕಂಡಿನ್ನೂ ಮೂರೇ ದಿವಸವಾಗಿಲ್ಲ!"

"ಹೌದು ಕಿಟ್ಟೂ....ನಲವು ಕ್ಷಣಿಕ—ನೋವು ಶಾಶ್ವತ."

"ಬೆಳಿಗ್ಗೆ ಎಂಟರ ಬಸ್ಸಿಗೆ ನಾನು ಹೋಗಿ ಬರುತ್ತೇನೆ." ಎಂದಷ್ಟೇ ಹೇಳಿ ಅಲ್ಲಿಂದ ಎದ್ದೆ.

ಸೋಮು ರೂಮಿನಿಂದ ನಮ್ಮ ಮನೆಗೆ ಐದು ಮೈಲಿ. ಅದನ್ನು ಯಾವಾಗ ಮುಗಿಸಿದೆನೋ ಕಾಣೆ. ಅಲ್ಲಿಂದ ಹಾರಿ ಮನೆಗೆ ಬಂದಂತಾಗಿತ್ತು. ಮನಸ್ಸು ಅಷ್ಟು ಹಗುರವಾಗಿತ್ತು. ಆದರೆ ಮನಸ್ಸಿನಲ್ಲಿ ಒಂದೇ ದುಗುಡ—ಬೆಳಿಗ್ಗಿನ ಬಸ್ಸಿಗೆ ಇನ್ನೂ ಹತ್ತು ತಾಸು ಕಾಯಬೇಕಲ್ಲಾ ಎಂದು.



# ಪ್ರತಿರೂಪ

ಪಾಪಣ್ಣನ ಕೈ ನೋಡಿದವರೆಲ್ಲರೂ ಒಂದೇ ಮಾತು ಹೇಳುತ್ತಿದ್ದರು. ೩೯ ಕಳೆಯಬೇಕು—ಆಗ ದೆಸೆ ಆರಂಭವಾಗುತ್ತದೆ; ೪೨ ಆದ ಮೇಲೆ ದೆಸೆಯ ಪೂರ್ಣ ಕಳೆ. ಮನೋವಾಂಛಿತ ಪೂರ್ಣ ಸಫಲವಾಗುತ್ತದೆ. ಅಲ್ಲಿಯವರೆಗೆ ಸ್ವಲ್ಪ ಕಷ್ಟದಲ್ಲಿಯೇ ಕಾಲಹಾಕಬೇಕು. ಪಾಪಣ್ಣ ದುಡಿಯುವುದಕ್ಕೆ ಅಂಜುತ್ತಿರಲಿಲ್ಲ. ಬೆಳಿಗ್ಗೆಯಿಂದ ಸಂಜೆಯವರೆವಿಗೂ ಬಿಸಿಲಿನಲ್ಲಿ ಅಲೆಯುವುದು ಅವನಿಗೆ ವೈಗಂಟಹೋಗಿತ್ತು. ಆದರೆ ದುಡಿತಕ್ಕೆ ತಕ್ಕ ಪ್ರತಿಫಲವಿರಲಿಲ್ಲ.

ಸಣ್ಣಪುಟ್ಟ ಕಂಟ್ರ್ಯಾಕ್ಟು ಮಾಡಿ ಪಾಪಣ್ಣ ಹದಿನೈದು ಸಾವಿರಗಳವರೆಗೆ ಗಳಿಸಿದ್ದ. ಆ ಹಣ ಅವನು ಕೈಯಲ್ಲಿಟ್ಟುಕೊಂಡಿದ್ದರೆ ಸುಖವಾಗಿ ಇರಬಹುದಾಗಿತ್ತು. ಅವರಿವರ ಮಾತು ಕೇಳಿ ಕಬ್ಬಿಣದ ವ್ಯಾಪಾರಿ ಲತೀಫನಿಗೆ ಹಣಕೊಟ್ಟ. ಸಾಹೇಬರು ಎಲ್ಲ ಸಾಲಗಾರರಿಗೂ ದಗಾಕೊಟ್ಟು ಮಲಬಾರಿಗೆ ಪರಾರಿಯಾದರು. ಪಾಪಣ್ಣನ ಕೊರಳಿಗೆ ಕಬ್ಬಿಣದ

ಡೆಬ್ಬೆಗಳು, ದೂಲಗಳು, ನಟ್‌ಬೋಲ್ಟ್‌ಗಳು, ಮೊಳೆ ಸ್ಕ್ರೂಗಳು ಗಂಟುಬಿದ್ದವು. ನಮಾಜ್ ಮಾಡಲಿಕ್ಕೆ ಹೋಗಿ ಮಸೀದಿಯೇ ಕೊರಳಿಗೆ ಬಿದ್ದಹಾಗಾಯಿತು. ಚಿನ್ನಬೆಳ್ಳಿ ಕೊಟ್ಟು ಕಬ್ಬಿಣ ಕಟ್ಟಿಕೊಂಡೆನಲ್ಲಾ ಎಂದು ಒಂದೇ ಸಮನಾಗಿ ಮರುಗಿದ.

ಜೋತಿಷ್ಯದ ಫಲ ಸತ್ಯವೆನಿಸುವಂತೆ ಪಾಪಣ್ಣನ ಭಾಗ್ಯದ ಬಾಗಿಲು ಇದ್ದಕ್ಕಿದ್ದಂತೆ ತೆರೆಯಿತು. ಸಕಾಲದಲ್ಲಿ ಎರಡನೆಯ ಮಹಾ ಯುದ್ಧ ವಾರಂಭವಾಯಿತು. ಎಲ್ಲಿ ನೋಡಿದರೂ ಮಿಲ್ಟ್ರಿಯವರ ಓಡಾಟ. ಖಾಲಿ ಜಾಗ, ಮರ ಕಬ್ಬಿಣದ ಸಾಮಾನು ಯಾವಪೂ ಉಳಿಯಲಿಲ್ಲ. ಪಾಪಣ್ಣನಿಗೆ ಒಂದು ಭಾರಿ ಮಿಲ್ಟ್ರಿ ಕಂಟ್ರಾಕ್ಟ್ ಸಿಕ್ಕಿತು. ಅದರ ನೆರವಿನಲ್ಲಿ ಮೂರು ರೂಪಾಯಿ ಬಿದ್ದಿದ್ದ ಕಬ್ಬಿಣಕ್ಕೆ ೪೨ ರೂಪಾಯಿಯಂತೆ ಬೆಲೆ ದೊರಕಿಸಿದ. ಹದಿನೈದುಸಾವಿರ ಎರಡು ಲಕ್ಷ ಮುಟ್ಟಿತು. ಜತೆಗೆ ಕಂಟ್ರಾಕ್ಟಿನಿಂದ ಒಂದು ಲಕ್ಷಕ್ಕಿಂತ ಹೆಚ್ಚಾಗಿ ಗಳಿಸಿದ. ಒಮ್ಮೆ ಕಟಾಕ್ಷ ಚೆಲ್ಲಿದ ಧನಲಕ್ಷ್ಮಿ ಪಾಪಣ್ಣನನ್ನು ಗಟ್ಟಿಯಾಗಿ ಆಶ್ರಯಿಸಿದಂತೆ ಕಂಡುಬಂತು. ಅವನು ಮುಟ್ಟಿದೆಲ್ಲಾ ಚಿನ್ನ.

ಕೈಗೆ ನಾಲ್ಕುಕಾಸು, ಬರುತ್ತಲೆ ಪಾಪಣ್ಣ ಮೊದಲು ಮನೆಯನ್ನು ಚೆಂದವಾಗಿ ಕಾನ್‌ಕ್ರೀಟಿನಲ್ಲಿ ಕಟ್ಟಿಸಿ, ಒಂದು ಕಾರು ಕೊಂಡ. ಮೇಸ್ತ್ರಿ ಪಾಪಣ್ಣನನ್ನು ಜನ ಭಯಭಕ್ತಿಯಿಂದ 'ಕಂಟ್ರಾಕ್ಟರ್ ಪಾಪಣ್ಣನವರು' ಎಂದು ಸಂಬೋಧಿಸಲಾರಂಭಿಸಿದರು.

ಪಾಪಣ್ಣನ ಕುಟುಂಬ ಸಣ್ಣದು. ಒಬ್ಬಳೇ ಮಗಳು — ಲಕ್ಷ್ಮಿ. ಆ ಮಗಳು ಸುಖವಾಗಿರುವುದಕ್ಕೆ ಬೇಕಾದ ವ್ಯವಸ್ಥೆ ಮಾಡಿದ. ಸಂಗೀತಕ್ಕೆ ಒಬ್ಬ ಮೇಷ್ಟ್ರರು; ಪಾಠಕ್ಕೆ ಒಬ್ಬ ಮೇಷ್ಟ್ರರು. ಅವಳನ್ನು ಸ್ಕೂಲಿಗೆ ಕರೆದುಕೊಂಡು ಹೋಗಿಬರುವುದಕ್ಕೆ ಒಬ್ಬ ಪ್ರತ್ಯೇಕ ಆಳು.

ಧನಲಕ್ಷ್ಮಿ ಪಾಪಣ್ಣನನ್ನು ಒಲಿದಿದ್ದಂತೆ ವಿದ್ಯಾಲಕ್ಷ್ಮಿ ಅವನ ಮಗಳನ್ನು ಒಲಿದಿರಲಿಲ್ಲ. ಸಂಗೀತ, ಪಾಠಗಳ ಮೇಷ್ಟ್ರುಗಳು ಅವಳ ಮುಂದೆ ತಲೆ ಚಚ್ಚಿಕೊಂಡು ಬೇಸತ್ತಿದ್ದರು. ಆದರೆ ತಿಂಗಳು ತಿಂಗಳಿಗೆ ತಪ್ಪದೆ ಬರುತ್ತಿದ್ದ ಮೂವತ್ತು ರೂಪಾಯಿಯ ವರಮಾನ ಅವರ ಬೇಸರಿಕೆಯನ್ನು ಪರಿಹರಿಸುತ್ತಿತ್ತು.

ಲಕ್ಷ್ಮಿ ತಂದೆಯನ್ನೇ ರೂಪದಲ್ಲಿ ಹೋಲುತ್ತಿದ್ದಳು ; ಬುದ್ಧಿಯಲ್ಲಿ ತಾಯಿಯ ಪಡಿಯಚ್ಚು. ಕಪ್ಪು ಕೆಂಪು ಮಿಶ್ರವಾದ ಹರಳೆಣ್ಣೆ ಬಣ್ಣ. ಎತ್ತರದ ಆಳು. ತುಂಬಿದ ಮೈಕಟ್ಟು. ಮುಖಕ್ಕೆ ನಿಶಾನೆಹಾಕಿದಂತೆ ಮೂಗು. ಅದರ ಮೇಲೆ ದಪ್ಪಕನ್ನಡಕ. ಈ ರೂಪವನ್ನು ಬನಾರಸ್ ಸೀರೆ, ಧರ್ಮಾವರದ ಸೀರೆ, ವಜ್ರವೈಢೂರ್ಯಗಳಿಂದ ಅಂದಗೊಳಿಸಬೇಕೆಂದು ವಿಶ್ವಪ್ರಯತ್ನ ಮಾಡುತ್ತಿದ್ದಳು. ತಿಂಗಳಿಗೆ ಎರಡು ಡಬ್ಬ ಕ್ಯೂಟಿಕೂರಾ ಪುಡಿ, ಮೂರುಜಾಡಿ ಪಾಂಡ್ ಕ್ರೀಮ್ ಆದರೂ ಸಾಲುತ್ತಿರಲಿಲ್ಲ. ತಲೆಗೆ ಜಗತ್ತಿನಲ್ಲಿ ದೊರಕುವ ಎಲ್ಲ ಕೇಶವರ್ಧಿನಿಗಳನ್ನು ಹಚ್ಚುತ್ತಿದ್ದರೂ ಚೇಳಿನ ಕೊಂಡಿಯಂಥ ಅವಳ ಜಡೆ ಒಂದಂಗುಲವೂ ಬೆಳೆಯಲಿಲ್ಲ.

ಲಕ್ಷ್ಮಿ ತಾಯಿಗೆ ದೊಡ್ಡ ಕೊರಗು ಹತ್ತಿತು. ಮಗಳು ೧೯ ಮೀರಿದ್ದರೂ ಅವಳಿಗೆ ಯೋಗ್ಯ ವರ ದೊರೆತಿರಲಿಲ್ಲ. ಲಕ್ಷ್ಮಿ ವಯಸ್ಸಿನ ಕಟ್ಟನ್ನು ಮೀರಿ ೨೫-೩೦ ವರ್ಷದ ಪ್ರೌಢೆಯಂತೆ ಕಾಣುತ್ತಿದ್ದಳು. ಮಗಳನ್ನು ಕಂಡಾಗಲೆಲ್ಲಾ ಅವಳು ದಿನದಿನಕ್ಕೆ ಬೆಳೆಯುತ್ತಿರುವಂತೆ ತಾಯಿಗೆ ಕಂಡುಬಂದು ಅವಳ ವ್ಯಥೆಯನ್ನು ಹೆಚ್ಚಿಸುತ್ತಿತ್ತು. ಆದರೆ ಲಕ್ಷ್ಮಿ ಇನ್ನೂ ದೊಡ್ಡವಳಾಗಿರಲಿಲ್ಲ. ಇದೇ ಒಂದು ಪುಣ್ಯ ಎಂದು ತಾಯಿ ಭಾವಿಸಿದಳು.

ಒಂದು ದಿನ ದುಡಿದು ದುಡಿದು ಸಾಕಾಗಿ ಪಾಪಣ್ಣ ಮನೆಗೆ ಬಂದು ಕುಳಿತು ರೇಡಿಯೋ ಕಿವಿ ಹಿಂಡುತ್ತಿದ್ದಾನೆ. ಇದ್ದಕ್ಕಿದ್ದಂತೆ ರೇಡಿಯೋಗೆ ಸ್ವಲ್ಪ ದೂರದಲ್ಲಿದ್ದ ಸ್ವಿಚ್ 'ಕಟ್' ಅಂತು. ರೇಡಿಯೋ 'ಕೊರೋ' ಎಂದು ತೆಪ್ಪಗಾಯಿತು. ಪಾಪಣ್ಣ ಕನಲಿ ಕಣ್ತೆರುಗಿಸಿದ– ಎದುರಿಗೆ ಹೆಂಡತಿ

"ಸ್ವಿಚ್ ಏಕೆ ಹಾಕಿದೆ ಕಮಲೂ" ಎಂದ.

"ಸ್ವಲ್ಪ ಮಾತನಾಡಬೇಕಾಗಿದೆ. ಪುರಸತ್ತು ಇದೆಯೇನು ?"

"ಯಾವ ವಿಷಯ"

"ಮನೆ ವಿಷಯ"

"ನನ್ನ ಕೇಳುವುದೇನಿದೆ ? ನೀನು ಏನು ಮಾಡಿದರೂ ನನಗೆ ಸಮ್ಮತ"

" ಈ ಬುದ್ಧಿವಂತಿಕೆ ಮಾತು ಸಾಕು. ನಿಮ್ಮ ಮಗಳಿಗೆ ಗಂಡು ಹುಡುಕುತ್ತೀರೋ ಇಲ್ಲವೋ? "

" ಪ್ರಯತ್ನ ನಡೆಸಿದ್ದೀನಿ? "

" ಐದು ವರ್ಷದಿಂದಲೂ ನಡೆಸುತ್ತಲೇ ಇದ್ದೀರಿ. ಈಗ ಅವಳಿಗೆ ೧೯ ತುಂಬುತ್ತ ಬಂತು. ದೊಂಬರಗಣೆ ಹಾಗೆ ಬೆಳೆದು ಕೂತಿದ್ದಾಳೆ."

" ಕುಲವನಹಳ್ಳಿ ಬೈರಪ್ಪಗೌಡರ ಮಗ ಒಬ್ಬ ಇದ್ದಾನೆ. ಅವರ ಹತ್ತಿರ ಜನ ಬಿಟ್ಟಿದ್ದೀನೆ. "

" ಏನಾದರೂ ಈ ವರ್ಷ ಲಗ್ನಮಾಡಿಬಿಡಲೇ ಬೇಕು. ಸುಮ್ಮನೆ ಎಲ್ಲರ ಬಾಯಿಗೂ ನಾವು ಬೀಳುವಂತಾಗಿದೆ. "

" ಬೈರಪ್ಪಗೌಡರ ವಿಷಯ ಇವತ್ತು ನಾಳೆ ತಿಳಿಯುತ್ತೆ. ಅದನ್ನು ನೋಡಿಕೊಂಡು ಮುಂದಿನ ವಿಚಾರ ಮಾಡೋಣ. "

" ನೀವೇ ಯಾಕೆ ಕುಲವನಹಳ್ಳಿಗೆ ಹೋಗಿಬರಬಾರದು. "

" ಹೆಣ್ಣು ಕೊಡುತ್ತೇವೆ ಎಂದು ನಾವು ಹೋಗುವುದು ಹೀನಾಯ. ಏನೋ ಐಬಿದೆ ಎಂದು ಅವರು ಭಾವಿಸಿಕೊಳ್ಳುವುದಕ್ಕೆ ನಾವೇ ದಾರಿ ಮಾಡಿಕೊಟ್ಟ ಹಾಗಾಗುತ್ತೆ. "

" ಹೌದು. ಅದೂ ನಿಜವೇ? ಇನ್ನು ನೀವು ಸುಮ್ಮನೆ ಕೂತರೆ ಆಗಲ್ಲ. ಸ್ವಲ್ಪ ಸುಟಿಯಾಗಿ ಓಡಿಯಾಡಬೇಕು. "

" ಹಾಗೇ ಆಗಲಿ. ಸ್ವಿಚ್ ಹಾಕು "

ಎಂದು ಹೇಳಿದ. ಕಮಲಮ್ಮ ಸ್ವಿಚ್ ಹಾಕಿ ಹೊರಟುಹೋದಳು.

ಪಾಪಣ್ಣನ 'ನೆಂಟಸ್ತಿಕೆ' ಮಾಡುವುದಕ್ಕೆ ಬೈರಪ್ಪನಿಗೆ ಇಷ್ಟವಿತ್ತು. ಗೌಡರ ಮಗ ಅಸೆಂಬ್ಲಿ ನಂಬರಾಗಬೇಕು ಎಂದು ಓಡಾಡುತ್ತಿದ್ದ. ಅದಕ್ಕೆ ಹಣಕಾಸು ಸುಲಭವಾಗಿ ಪಾಪಣ್ಣನಿಂದ ಕಸಿಯಬಹುದೆಂದು ಬೈರಪ್ಪ ಲೆಕ್ಕಹಾಕಿದ್ದ.

ಬೈರಪ್ಪನ ಆಸೆ ಫಲಿಸಿತು. ಕಮಲಮ್ಮನ ತಾಪವಡಗಿತು. ಶುಭ ಮುಹೂರ್ತದಲ್ಲಿ ಬೈರಪ್ಪಗೌಡರ ಮಗ– ಭಾವಿ ಅಸೆಂಬ್ಲಿ ನಂಬ್ರ ರಾಮಯ್ಯನಿಗೂ, ಪಾಪಣ್ಣನ ಮಗಳು ಲಕ್ಷ್ಮಮ್ಮನಿಗೂ ಲಗ್ನವಾಯಿತು. ಪಾಪಣ್ಣ ೬೦–೭೦ ಸಾವಿರ ರೂಪಾಯಿ ಬಳುವಳಿಕೊಟ್ಟು ಲಗ್ನವನ್ನು

ಅದ್ಧೂರಿಯಿಂದ ಮಾಡಿ ಎಲ್ಲರ ಕೈಯಲ್ಲೂ 'ಭಲೆ' ಎನಿಸಿಕೊಂಡ. ಲಗ್ನ ಸಮಾರಂಭದಲ್ಲಿ ಸರ್ಕಾರದ ದೊಡ್ಡ ಅಧಿಕಾರಿಗಳನ್ನೂ, ಮಿಲ್ಟ್ರಿ ಅಧಿಕಾರಿಗಳನ್ನೂ ಇಂಜನೀಯರುಗಳು ಕಂಟ್ರ್ಯಾಕ್ಟರುಗಳನ್ನೂ ಬರಮಾಡಿಕೊಂಡು ಅವರಿಗೆ ಒಂದು ವಿಶೇಷ ವಿಸ್ಕಿ–ಬ್ರ್ಯಾಂಡಿ ಮೇಜುವಾನಿ ಮಾಡಿಸಿ ಸ್ಪೆನ್ಸರ್ ಕಂಪೆನಿಗೆ ೨,೦೦೦ ರೂಪಾಯಿ ಸಂತೋಷವಾಗಿ ತೆತ್ತ. ಈ ಸ್ಪೆನ್ಸರ್ ಪಾರ್ಟಿಯ ಪ್ರಭಾವದಿಂದ ತನಗೆ ಒಂದಲ್ಲೊಂದು ದಿವಸ 'ಧರ್ಮಪ್ರಕಾಶ' ಅಥವಾ 'ರಾಜಸೇವಾಸಕ್ತ' ಬರಬಹುದೆಂಬ ನಿರೀಕ್ಷೆ ಪಾಪಣ್ಣನಲ್ಲಿರದಿರಲಿಲ್ಲ.

ಲಗ್ನ ಮುಗಿಸಿಕೊಂಡು ಊರಿಗೆ ಹಿಂದಿರುಗಿದ ಕೆಲವು ದಿವಸಗಳಲ್ಲಿ ಬೀಗರಿಂದ ಒಂದು ಪತ್ರ ಪಾಪಣ್ಣಗೆ ಬಂತು. ಶುಭಮುಹೂರ್ತ ನೋಡಿ ಪ್ರಸ್ಥದ ಏರ್ಪಾಡು ಮಾಡಿರೆಂದು. ಪಾಪಣ್ಣನಿಗೂ ಅವನ ಹೆಂಡತಿಗೂ ದೊಡ್ಡ ಯೋಚನೆ ಹತ್ತಿಬಿಟ್ಟಿತು. ಲಕ್ಷ್ಮಿ ಪ್ರಾಪ್ತವಯಸ್ಸಿಗೆ ಬಂದಿದ್ದರೂ ವಿಕಸಿಸುವ ಗೋಜಿಗೆ ಹೋಗಿರಲಿಲ್ಲ. ಏನು ಮಾಡಬೇಕೆಂದು ಬಗೆಹರಿಯದಾಯಿತು. ಪಾಪಣ್ಣ ಏನೋ ಸಬೂಬು ಹೇಳಿ ದಿನ ದೂಡಲೆತ್ನಿಸಿದ.

ಕಮಲಮ್ಮ ಸುಮ್ಮನೆ ಕೂಡಲಿಲ್ಲ. ಕೂಡಲೆ ಡಾಕ್ಟರನ್ನು ಕರೆಯಿಸಿ ಲಕ್ಷ್ಮೀಗೆ ಔಷದೋಪಚಾರ, ಇಂಜಕ್ಷನ್ ಆರಂಭಿಸಿದಳು. ಮೂರು ತಿಂಗಳು ಒಂದೇ ಸಮನಾಗಿ ಚಿಕಿತ್ಸೆ ನಡೆಯಿತು. ಆದರೆ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ.

ಬೀಗರ ವರಾತ ಹೆಚ್ಚಾಯಿತು. ಪಾಪಣ್ಣನ ಕಾಗದಗಳು ಅವರಿಗೆ ಯಾವ ಸಮಾಧಾನವನ್ನೂ ತರಲಿಲ್ಲ. ಕೊನೆಗೆ ಬೈರಪ್ಪ ಕೋಪಗೊಂಡು 'ಹದಿನೈದು ದಿವಸಗಳೊಳಗಾಗಿ ಲಗ್ನಯಿಟ್ಟು ಪತ್ರ ಹಾಕದಿದ್ದರೆ ಮಗನಿಗೆ ಬೇರೆ ಲಗ್ನಮಾಡುವುದಾಗಿ' ಬೆದರಿಕೆ ಹಾಕಿದರು.

ಪಾಪಣ್ಣನಿಗೆ ಹುಚ್ಚು ಹಿಡಿಯಿತು. ವೈದ್ಯಕ್ಕೂ ಸೆಡ್ಡುಹೊಡೆದು ನಿಂತಿದ್ದ ಮಗಳನ್ನು ಕಂಡರೆ ಚಿಟಗುಟ್ಟುವಂತಾಯಿತು. ಮೊದಲಿನ ಸಮಾಧಾನ ಮಾಯವಾಯಿತು. ಮಾತೆತ್ತಿದರೆ ರೇಗುವುದು, ಕೂಗುವುದು, ಹಾರಾಡುವುದು ಆರಂಭವಾಯಿತು.

ವೈದ್ಯ ಗುಂಡೂ ಪಂಡಿತರು ಪಾಪಣ್ಣನ ಹಳೆಯ ಪರಿಚಯಸ್ಥರು. ಪಾಪಣ್ಣ ಮೇಸ್ತ್ರಿ ಆಗಿದ್ದಾಗ ಅವರ ಹತ್ತಿರ ಔಷಧೋಪಚಾರಗಳಿಗೆ ಬರುತ್ತಿದ್ದ. ಈಗ ದೊಡ್ಡ ಕಂಟ್ರ್ಯಾಕ್ಟರ್ ಆದ ಮೇಲೆ ಆಳಲೇಕಾಯಿ ಪಂಡಿತರ ಹತ್ತಿರ ಹೋಗುವುದು ತನ್ನ ಘನತೆಗೆ ಕಡಮೆಯಾದುದೆಂದು ದೊಡ್ಡ ದೊಡ್ಡ ಡಾಕ್ಟರುಗಳನ್ನು ಹಿಡಿದಿದ್ದ. ವಿಧಿಯಿಲ್ಲದೆ ಈಗ ಆಳಲೇಕಾಯಿ ಪಂಡಿತರ ಕಾಲು ಹಿಡಿಯಬೇಕಾಗಿತ್ತು. ತಾನೇ ಹೋಗಿ ಗುಂಡೂ ರಾಯರನ್ನು ಕಾರಿನಲ್ಲಿ ಕೂಡಿಸಿಕೊಂಡು ಬಂದ.

ವೈದ್ಯರು ನಾಡಿ ಪರೀಕ್ಷಿಸಿದರು. ದೀರ್ಘವಾಗಿ ಯೋಚಿಸಿ,

"ಸಾವಕಾರರೇ. . . ."

"ಏನು ಸ್ವಾಮಿ."

"ಈಗ ಅಮ್ಮಯ್ಯಂಗೆ ಎಷ್ಟು ವಯಸ್ಸು."

"ಹತ್ತೊಂಭತ್ತು ತುಂಬುತ್ತ ಬಂದಿದೆ ಸ್ವಾಮಿ."

"ಡಾಕ್ಟರು ಏನು ಹೇಳಿದರು."

"ಅವರ ಮುಂಡಮೋಚಿತು – ಏನು ಹೇಳುತ್ತಾರೆ. ಇಂಜಕ್ಷನ್ ಆಯಿತು, ಆಪರೇಷನ್ ಆಗಬೇಕು ಅಂದರು."

"ಆಪರೇಷನ್ ಇಲ್ಲದೆ ನಾನು ಸರಿಪಡಿಸುತ್ತೇನೆ."

"ಅಷ್ಟುಮಾಡಿದರೆ ತುಂಬ ಉಪಕಾರ ಸ್ವಾಮಿ. ನೀವು ಏನು ಕೇಳಿದರೂ ಕೊಡುತ್ತೇನೆ."

"ಆದರೆ ಕ್ರಮ ಸ್ವಲ್ಪ ಕಷ್ಟ. ಅದಕ್ಕೆ ನೀವೇನನ್ನುತ್ತೀರಿ"

"ನೀವು ಹೇಗೆ ಹೇಳಿದರೆ ಹಾಗೆ ಮಾಡುತ್ತೇವೆ. ಅದರಲ್ಲಿ ಚಾ-ಚೂ ತಪ್ಪುವುದಿಲ್ಲ."

"ಅಮ್ಮಯ್ಯಂಗೆ ಮೈಯಲ್ಲಿ ಏನೂ ಇಲ್ಲ. ಆರೋಗ್ಯವಾಗಿದ್ದಾಳೆ."

"ಹಾಗಾದರೆ. . . ."

"ಇದು ಮಾನಸಿಕ ರೋಗ."

"ಮಾನಸಿಕ ರೋಗವೆಂದರೇನು ವೈದ್ಯರೇ. ಅವಳಿಗೆ ನಾವು ಯಾವುದಕ್ಕೂ ಕಡಿಮೆ ಮಾಡಿಲ್ಲವಲ್ಲಾ."

"ಕಡಿಮೆ ಮಾತಲ್ಲ ಸಾವಕಾರರೇ. ಒಬ್ಬೊಬ್ಬರ ಪ್ರಕೃತಿ ಒಂದೊಂದು ರೀತಿ ಇರುತ್ತೆ."

"ಏನು ಮಾಡಬೇಕು ಹೇಳಿ ಸ್ವಾಮಿ."

"ಚಿಕಿತ್ಸೆ ಕಷ್ಟ ಅಂದೆ– ಇದರಲ್ಲಿ ಧರ್ಮಸಂಕಟವೂ ಬರುತ್ತೆ."

"ಏನೇ ಆಗಲಿ ಹೇಳಿ ಸ್ವಾಮಿ"

"ನೀವು ತಪ್ಪು ತಿಳಿದುಕೊಳ್ಳಬಾರದೂಂತ ಇಷ್ಟು ಪೀಠಿಕೆ ಹಾಕುತ್ತಾ ಇದ್ದೀನಿ."

"ನಿಮ್ಮ ವಿಚಾರ ತಪ್ಪು ತಿಳಿದುಕೊಳ್ಳೋದೇ ಗುಂಡುರಾಯರೇ. ಅಮ್ಮಯ್ಯ ನೀವು ಎತ್ತಿ ಆಡಿಸಿದ ಮಗು ಅಲ್ಲವೇ ?"

"ಕಾಲ ಬದಲಾಯಿಸಿದೆಯಪ್ಪಾ. ಈಗ ನೀವು ದೊಡ್ಡ ಸಾವಕಾರರು."

"ನಿಮ್ಮ ವಿಚಾರದಲ್ಲಿ ತಪ್ಪು ನಡೆದಿದ್ದೇನೆ. ಕ್ಷಮಿಸಬೇಕು. ಈಗ ಬಂದಿರೋ ಸಂಕಟ ಪರಿಹಾರ ಮಾಡಬೇಕು."

"ಆಗಲಿ. ಅಮ್ಮಯ್ಯನ ವಿಷಯ ಮಾನಸಿಕವಾದದ್ದು ಎಂದು ಹೇಳಿದೆ. ಆಕೆ ದೊಡ್ಡವಳಾಗಬೇಕಾದುದು ಔಷಧ, ಇಂಜಕ್ಷನ್‌ಗಳಿಂದಲ್ಲ. ಇದಕ್ಕೆ ಮಾನವ ಸಂಪರ್ಕ ಬೇಕು. ನೀವು ನಾಲ್ಕು ದಿವಸ ಅವಳನ್ನು ಗಂಡನ ಮನೆಗೆ ಕಳಿಸಿಕೊಡಿ. ಗಂಡಹೆಂಡತಿ ಜತೆಯಲ್ಲಿ ಕೂಡುವುದು, ಮಾತನಾಡುವುದು, ನಗುವುದು – ಮೈಕೈ ಮುಟ್ಟುವುದು ಮಾಡಲಿ. ಆಗ ತಾನೇತಾನಾಗಿ ಎಲ್ಲ ಸರಿಹೋಗುತ್ತದೆ."

"ಅದೇ ಕಷ್ಟ ವೈದ್ಯರೇ. ಅಮ್ಮಯ್ಯ ದೊಡ್ಡವಳಾಗಿಲ್ಲ ಅನ್ನುವ ವಿಷಯ ಬೀಗರ ಮನೆಯುವರಿಗೆ ತಿಳಿಯಬಾರದು. ಇದು ಅವರಿಗೆ ಗೊತ್ತಾದರೆ ಕಷ್ಟಕ್ಕೇ ಬರುತ್ತದೆ. ಹೇಗೆ ಮಾಡೋಣ ಹೇಳಿ."

"ಇನ್ನೊಂದು ದಾರಿ ಇದೆ. ಆದರೆ ಅದು ತೊಂದರೆ ದಾರಿ. ಧೈರ್ಯವಾಗಿ ನೀವು ನಿಭಾಯಿಸುವ ಹಾಗಿದ್ದರೆ ಹೇಳಿಯೂ ಸಾರ್ಥಕ."

"ಹೇಳೀಪ್ಪ."

"ನಿಮ್ಮ ನಂಬಿಕೆ ಉಳಿಸಿಕೊಂಡಿರೋ ಹುಡುಗರು ನಿಮ್ಮ ಪೈಕಿ ಯಾರಾದರೂ ಇದ್ದಾರೆಯೇ ?"

"ನಮ್ಮ ಜನವೇ?"

"ಹೂ."

"ನಮ್ಮ ಜನ ಯಾರೂ ಇಲ್ಲ. ಆದರೆ ಪಾಠದ ಮೇಷ್ಟ್ರು ಒಳ್ಳೆಯ ಹುಡುಗ."

"ಯಾರವನು?"

"ಕೋಟೆ ಸ್ಕೂಲಿನಲ್ಲಿ ಮೇಷ್ಟ್ರಾಗಿತ್ತಿಲ್ಲವೇ ವೆಂಕಪ್ಪಯ್ಯನವರು... ಅವರ ಮಗ ಸುಬ್ಬರಾಯು."

"ನಮ್ಮ ಸುಬ್ಬೂನೇ.... ಅವನನ್ನೂ, ಅವರಪ್ಪನನ್ನೂ ನಾನು ಚೆನ್ನಾಗಿ ಬಲ್ಲೆ. ಅವನಿಗೆ ಈ ಕೆಲಸ ವಿಧಿಸಿದಿರೋ?"

"ನಾಳೆ ಹೆಚ್ಚುಕಡಿಮೆಯಾದರೆ?"

"ಅದು ನಿಮ್ಮ ಧೈರ್ಯ. ಹುಡುಗ ಯೋಗ್ಯ. ನಾನು ಬೇಕಾದರೆ ಅವನಿಗೆ ಹೇಳುತ್ತೀನಿ. ನೀವೂ ನಿಮ್ಮ ಹೆಂಡತಿ ಚೆನ್ನಾಗಿ ಯೋಚನೆ ಮಾಡಿ ಅವನನ್ನು ನಮ್ಮ ಮನೆಗೆ ಕಳಿಸಿಕೊಡಿ."

"ಆಗಲಿ ಸ್ವಾಮಿ. ಯೋಚನೆಮಾಡಿ ತಿಳಿಸುತ್ತೇನೆ."

ವೈದ್ಯರ ಮನೆಗೆ ಮಾರನೆಯ ದಿನವೇ ಸುಬ್ಬರಾಯು ಅವರನ್ನು ಹುಡುಕಿಕೊಂಡು ಬಂದ. 'ಸಾಹುಕಾರರು ಕಳಿಸಿದ್ದಾರೆ' ಎಂದು ಅವನು ಹೇಳುತ್ತಲೆ ಪಂಡಿತರು ನಕ್ಕು ಅವನನ್ನು ಒಳಗೆ ಕರೆದೊಯ್ದರು.

"ನೋಡು ಸುಬ್ಬೂ–ಒಂದು ಜವಾಬ್ದಾರಿ ಕೆಲಸ ನಿನಗೆ ವಹಿಸ ಬೇಕಾಗಿದೆ. ಉಂಡಮನೆಗೆ ಎರಡು ಬಗೆಯುವವನಲ್ಲ ನೀನು ಎಂದು ನಂಬಿ ಈ ಮಾತು ನಿನ್ನ ಹತ್ತಿರ ಪ್ರಸ್ತಾಪಮಾಡುತ್ತೇನೆ."

"ಹೇಳಿ ಪಂಡಿತರೇ – ಸಂಕೋಚವೇಕೆ?"

"ವಿಷಯ ಅಷ್ಟು ಮಹತ್ವದ್ದಪ್ಪ. ಬಹಳ ಗೋಪ್ಯವಾಗಿರಬೇಕು. ಪಾಪಣ್ಣ ನಿನಗೆ ಅನ್ನಕೊಟ್ಟ ಧಣಿ. ಅವರ ಮನೆ ಉಳಿಸೋಭಾರ ನಿನ್ನದು."

"ಅವರ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವ ಅವಕಾಶ ಸಿಕ್ಕಿದರೆ ನಾನು ಬೇಡವೆನ್ನುತ್ತೇನೆಯೇ ಪಂಡಿತರೇ. ನೀವು ಏನು ಹೇಳಿದರೂ ಮಾಡಲು ಸಿದ್ಧನಾಗಿದ್ದೇನೆ."

ಪಂಡಿತರು ಲಕ್ಷ್ಮಮ್ಮನ ಸ್ಥಿತಿಯನ್ನು ವರ್ಣಿಸಿ, ಆಕೆಯಲ್ಲಿ ಸ್ತ್ರೀತ್ವವನ್ನು ಪ್ರಚೋದಗೊಳಿಸುವ ಮಾರ್ಗವನ್ನು ಸುಬ್ಬರಾಯನಿಗೆ ವಿವರಿಸಿದರು. ಸುಬ್ಬರಾಯನ ಎದೆ ಹೊಡೆದುಕೊಳ್ಳುತ್ತಿತ್ತು. ಭಯ ವೈ ಮನಸ್ಸನ್ನಾವರಿಸಿತು.

"ನನಗೆ ಸಾಧ್ಯವಿಲ್ಲ ಪಂಡಿತರೇ. ನಾಳೆಯಿಂದ ಅವರ ಮನೆ ಪಾಠಕ್ಕೂ ಹೋಗುವುದಿಲ್ಲ."

"ಹೇಡಿ. ಇದೇಯೇ ನಿನ್ನ ಪೌರುಷ. ಮುರಿಯೋ ಮನೆ ಉಳಿಸು ತ್ತೇನೆ ಎಂದು ವಾಗ್ದಾನ ಮಾಡಿದ ಉತ್ತರಕುಮಾರ."

"ನಾನು ಹಿಂದಲೇಟು ಹೊಡೆಯುತ್ತಿಲ್ಲ ಪಂಡಿತರೇ. ಆದರೆ ಏನಾದರೂ ಅಕ್ರಮ ನಡೆದರೆ."

"ಅದಕ್ಕೆ ಅವಕಾಶ ಕೊಡಬೇಡ. ವೈದ್ಯ ರೋಗಿಯನ್ನು ಕಾಣುವ ಹಾಗೆ ಕಾಣುತ್ತಾ ಬಾ. ನಾಟಕದಲ್ಲಿ ಶೃಂಗಾರ ತೋರಿಸಲ್ವೇ – ಹಾವ ಭಾವವಿಲಾಸ ಮೆರಸಲ್ವೇ ಹಾಗೆ. ಇದೂ ಒಂದು ನಾಟಕ. ನೀನು ನಾಯಕ, ಲಕ್ಷ್ಮಿ ನಾಯಕಿ."

"ಇದು ಒಳ್ಳೆ ದೊಡ್ಡ ಪರೀಕ್ಷೆ."

"ಹೌದು. ಪರೀಕ್ಷೆಯಲ್ಲಿ ಗೆದ್ದುಬಂದರೆ ನಿನ್ನ ಹೆಚ್ಚುಗಾರಿಕೆ."

"ಆಗಲಿ ಪಂಡಿತರೇ. ಪ್ರಯತ್ನಿಸುತ್ತೇನೆ."

ಎಂದ. ಪಂಡಿತರು ತೃಪ್ತರಾದರು.

ನಿತ್ಯ ಸುಬ್ಬು ಪಾಠಕ್ಕೆ ಕೂಡುತ್ತಿದ್ದುದು ಕೆಳಗಿದ್ದ ಒಂದು ಕೋಣೆ ಯಲ್ಲಿ. ಮಾರನೆಯ ದಿವಸ ಅವನು ಪಾಠಕ್ಕೆ ಹೋದಾಗ ಮಹಡಿ ಮೇಲೆ ಲಕ್ಷ್ಮಿ ಕೋಣೆಯಲ್ಲಿಯೇ ಪಾಠವಾಗಬಹುದೆಂದು ಕಮಲಮ್ಮ ಹೇಳಿದರು.

ಲಕ್ಷ್ಮಿ ಕೋಣೆಯಲ್ಲಿದ್ದ ಸೋಫಾದ ಮೇಲೆ ಕುಳಿತು ಪಾಠ ಹೇಳ ತೊಡಗಿದ. ಪಾಠ ಅವಳು ತಪ್ಪು ಬರೆದುಕೊಂಡಾಗ ಅವಳ ಕೈಹಿಡಿದು ತಾನೇ ಬರೆಯಿಸಿದ.

ಸುಬ್ಬು ಪ್ರಯತ್ನಪೂರ್ವಕವಾಗಿ ಸಲಿಗೆ ಬೆಳಸತೊಡಗಿದ. ಅವಕಾಶ ಸಿಕ್ಕಿದಾಗ ಅವಳನ್ನು ಮುಟ್ಟುವುದು – ಮುಂಗುರುಳು ಸ್ವೇಚ್ಛೆಯಾಗಿ

ಹರಿದಾಡುತ್ತಿದ್ದರೆ ಅದನ್ನು ತಿದ್ದುವುದು—ಅವಳ ಬುಜಕ್ಕೆ ತನ್ನ ಬುಜ ತಾಗಿಸುವುದು. ಅವಳ ಬುಜದ ಮೇಲೆ ತಾನು ಕೈಹಾಕುವವರೆಗೆ ಸಲಿಗೆ ಬೆಳೆಯಿತು. ಲಕ್ಷ್ಮಿ ಯಾವದಕ್ಕೂ ಒಲ್ಲೆಯೆನ್ನುತ್ತಿರಲಿಲ್ಲ.

ಒಂದು ದಿನ ಮುಖಕ್ಕೆ ಮುಖವಿಟ್ಟು ಪಾಠ ಹೇಳುತ್ತಿರುವಾಗ ಲಕ್ಷ್ಮಿ ತಟಕ್ಕನೆ ಒಂದು ಪಕ್ಕಕ್ಕೆ ತಿರುಗಲು ಅವಳ ತುಟಿ, ಸುಬ್ಬರಾಯನ ತುಟಿ ಸವರಿತು. ಸುಬ್ಬರಾಯ ವಿದ್ಯುದಾವೇಗದಿಂದ ಅವಳನ್ನಪ್ಪಿ ಮುದ್ದಿಟ್ಟ....ಲಕ್ಷ್ಮಿ ತೋಳು ಸುಬ್ಬರಾಯನ ಕುತ್ತಿಗೆ ಬಳಸಿತು—ಮುತ್ತಿನ ಸುರಿಮಳೆಯಾಯಿತು. ಅವನು ಕೈಬಿಡಿಸಿಕೊಳ್ಳಲೆತ್ನಿಸಿದ. ಅವಳು ಬಿಡಲೊಲ್ಲಳು. ಸುಬ್ಬರಾಯನನ್ನು ಗಟ್ಟಿಯಾಗಿ ಅಪ್ಪಿ ಮತ್ತೆ ಮತ್ತೆ ಚುಂಬಿಸಿದಳು. ತಾಯಿ ಹೊರಗೆ ಕೂಗಿದಂತಾಗಲು ಅವನ ಕುತ್ತಿಗೆ ಬಿಟ್ಟಿದ್ದಳು. ಅವನ ಮುಖ ರಾಗರಂಜಿತವಾಗಿತ್ತು. ಕಣ್ಣುಗಳಿಂದ ಬಿಸಿರಕ್ತ ಧುಮುಕುತ್ತಿತ್ತು. ಸುಬ್ಬರಾಯನ ಮುಖ ಮೈಯೆಲ್ಲಾ ಬೆವರಿನ ಹೊಂಡದಲ್ಲಿ ಅದ್ದಿ ತೆಗೆದಂತಾಗಿತ್ತು.

ಅಂದೇ ರಾತ್ರಿ ಲಕ್ಷ್ಮಮ್ಮ ಹೊರಗಾದಳು.

ಪಾಪಣ್ಣ ಸಂತೋಷದ ಸುದ್ದಿಯನ್ನು ಬೀಗರಿಗೆ ತಿಳಿಸಿ, ೧೬ನೆಯ ದಿವಸಕ್ಕೆ ಪ್ರಸ್ತದ ಲಗ್ನವಿಟ್ಟು ಕಾಗದ ಬರೆದ.

ಪ್ರಸ್ತದ ಶಾಸ್ತ್ರ ಮುಗಿದಮೇಲೆ ಬೈರಪ್ಪ ಮಗ—ಸೊಸೆಯರೊಂದಿಗೆ ಕುಲವನಹಳ್ಳಿಗೆ ಪ್ರಯಾಣ ಬೆಳೆಸಿದರು. ಪಾಪಣ್ಣ ಸುಬ್ಬರಾಯನನ್ನು ಕರೆಸಿ ಒಂದು ಸಾವಿರ ರೂಪಾಯಿ ನಗದು ಹಣ, ಜತೆ ಜರತಾರಿ ಪಂಚೆ ಉಡುಗರೆ ಕೊಟ್ಟ. ಪಂಡಿತರಿಗೂ ಯೋಗ್ಯ ಸಂಭಾವನೆ ದೊರೆಯಿತು. ಪಾಪಣ್ಣ ಪರಮ ಶಾಂತಿಯಿಂದ ತನ್ನ ಧನಸಂಗ್ರಹ ಕೆಲಸವನ್ನು ಮುಂದುವರಿಸಿದ.

ಪಟ್ಟಣದಲ್ಲಿ ತಂದೆತಾಯಿಗಳಿಗೊಬ್ಬಳೇ ಮಗಳಾಗಿ ಬೆಳೆದ ಲಕ್ಷ್ಮಮ್ಮನಿಗೆ ಹಳ್ಳಿಯ ವಾಸ ಒಮ್ಮೆಲೇ ಸರಿಹೊಂದಲಿಲ್ಲ. ಆದರೆ ರಾಮಯ್ಯನ ಸಹವಾಸ, ವಿಶ್ವಾಸ ಅವಳ ಹೊಸತನವನ್ನು ಮಾಣಿಸಿದ್ದವು. ತಂದೆಯ ಮನೆಯಲ್ಲಿ ದೊರಕದಿದ್ದ ಭಾಗ್ಯ ಅವಳಿಗೆ ಸಿಕ್ಕಿತ್ತು. ಯೌವನದ ಕಳೆಗಳು ನಿಮಿರಿದಂತೆ ಅವಳಿಗೆ ಹೊಸ ಪ್ರಪಂಚ, ಹೊಸ ಅನುಭವಗಳ ಪರಿಚಯ

ವಾಗುತ್ತಿತ್ತು. ‘ಕಲ್ಲಿನ ಹಾಗೆ ಕುಳಿತಿದ್ದ ನನ್ನಲ್ಲಿ ಈ ರಾಗಭಾವನೆಗಳಿವೆಯೇ’ ಎಂದು ಒಮ್ಮೊಮ್ಮೆ ತಾನೇ ಯೋಚಿಸುವಳು. ಲಕ್ಷ್ಮಮ್ಮ ಗಂಡನ ಕಣ್–ಅಸು. ರಾಮಯ್ಯನ ಧ್ವನಿ ಕೇಳಿದರೆ ಸಾಕು ಅವಳ ಪ್ರತಿಯೊಂದು ನರವೂ ಉದ್ದೀಪನದಿಂದ ಹುರಿಯಾಗುತ್ತಿತ್ತು. ಇನ್ನೊಂದು ಮದುವೆಯ ಬೆದರಿಕೆ ಹಾಕಿದ್ದಕ್ಕೆ ಗಂಡನನ್ನು ‘ತರಾಟೆಗೆ’ ತೆಗೆದುಕೊಂಡಿದ್ದಳು. ರಾಮಯ್ಯ ಅದನ್ನು ತಂದೆಯ ಮೇಲೆ ಹಾಕಿ ಜಾರಿಕೊಳ್ಳುವ ಪ್ರಯತ್ನ ಸ್ವಲ್ಪವೂ ಸಫಲವಾಗಲಿಲ್ಲ.

ರಾಮಯ್ಯ, ಲಕ್ಷ್ಮಮ್ಮ ಇವರ ಮಧುರ ಮೈತ್ರಿಯ ಫಲದೊರೆಯಲು ಬಹಳ ದಿವಸ ಕಾಯಬೇಕಾಗಲಿಲ್ಲ. ಪಾಪಣ್ಣನಿಗೆ ಕಾಗದವೂ ಬಂತು.

“ನೀನು ಅಜ್ಜಿ ಆಗುತ್ತೀ ಕಣೇ”

ಎಂದು ಹೆಮ್ಮೆಯಿಂದ ಹೆಂಡತಿಯನ್ನು ಕೂಗಿ ಪಾಪಣ್ಣ ತಿಳಿಸಿದ.

“ಚೊಚ್ಚಿಲು ಬಾಣಂತನ–ಇಲ್ಲೇ ಕರೆದುಕೊಂಡು ಬರಬೇಕು.”

ಎಂದಳು ಕಮಲಮ್ಮ.

“ಬೇಡವೆಂದವರು ಯಾರು” ಎಂದು ಪಾಪಣ್ಣ ಹೇಳಿದ.

ಕುಪ್ಪಸದ ವಿಧಿ ವಿಜೃಂಭಣೆಯಿಂದ ಆಯಿತು. ಪಾಪಣ್ಣ ಮಗಳಿಗೆ ಸೊಗಸಾದ ವಜ್ರದ ಹಾರ ಮಾಡಿಸಿಕೊಟ್ಟ. ಬೀಗರು ಪಾಪಣ್ಣನ ಔದಾರ್ಯಕ್ಕೆ ಮನಸೋತು, ತಾವು ಎರಡನೆಯ ಲಗ್ನದ ಬೆದರಿಕೆ ಹಾಕಿದುದು ಅನುಚಿತವಾಯಿತೆಂದು ಸ್ಪಷ್ಟವಾಗಿ ಒಪ್ಪಿಕೊಂಡರು.

ಕಮಲಮ್ಮ ಬಯಸಿದಂತೆ ಬಾಣಂತನ ಅವರ ಮನೆಯಲ್ಲಿಯೇ ಆಯಿತು. ವಂಶೋದ್ಧಾರಕನಾದ ಗಂಡುಮಗ ಹುಟ್ಟಿದ. ಬೈರಪ್ಪ ಸಂಸಾರ ಸಮೇತರಾಗಿ ಮೊಮ್ಮಗನ ದರ್ಶನಕ್ಕೆ ದಯೆಮಾಡಿದರು. ಎಲ್ಲರೂ ಮಗುವನ್ನು ಆಶೀರ್ವದಿಸಿ, ಸಣ್ಣಪುಟ್ಟ ಉಡುಗೊರೆಗಳನ್ನಿತ್ತು, ಪಾಪಣ್ಣನಿಂದ ಮರ್ಯಾದೆ ಮಾಡಿಸಿಕೊಂಡು ಊರಿಗೆ ಮರಳಿದರು. ಮೂರು ತಿಂಗಳು ತುಂಬಿದೊಡನೆಯೇ ತಾನೇ ಬಂದು ಕರೆದುಕೊಂಡು ಹೋಗುವುದಾಗಿ ರಾಮಯ್ಯ ಮಾತುಕೊಟ್ಟ.

ಮೂರು ತಿಂಗಳು ಕಳೆಯಿತು. ಬೀಗರಿಂದ ಕಾಗದ ಪತ್ರವೇ ಇಲ್ಲ. ನಾಲ್ಕನೆಯ ತಿಂಗಳೂ ಆಯಿತು. ಐದನೆಯ ತಿಂಗಳಲ್ಲಿ ಬಂದು ಕರೆದು

ಕೊಂಡು ಹೋಗುತ್ತಾರೆಂದು ಪಾಪಣ್ಣ ನಂಬಿದ್ದ. ಐದನೆಯ ತಿಂಗಳೂ ಕಳೆದುಹೋಯಿತು. ಅವನ ಪತ್ರಗಳಿಗೆ ಬೈರಪ್ಪನಿಂದಾಗಲಿ, ರಾಮಯ್ಯ ನಿಂದಾಗಲಿ ಉತ್ತರವಿಲ್ಲ. ಪಾಪಣ್ಣ ಕಾರಣ ತಿಳಿಯದೆ ಕಳವಳಕ್ಕೀಡಾದ.

ಒಕ್ಕಣೆ ಬೆಳೆಸಿ, ಸ್ವಲ್ಪ ಖಂಡಿತವಾಗಿ ಒಂದು ಕಾಗದ ಬರೆದ. ಲಕ್ಷ್ಮಮ್ಮ ಅನ್ನನೀರು ಬಿಟ್ಟಿರುವುದನ್ನೂ ಪರ್ಯಾಯವಾಗಿ ತಿಳಿಸಿದ. ಅದಕ್ಕೆ ಉತ್ತರ ಬಂತು. ಬಾರದಿದ್ದರೆ ಚೆನ್ನಾಗಿರುತ್ತಿತ್ತಲ್ಲಾ ಎಂದು ಪಾಪಣ್ಣ ಯೋಚಿಸುವಂತಾಯಿತು. ಕಾಗದವನ್ನು ಕೈಯಲ್ಲಿ ಹಿಡಿದು ಪಂಡಿತರ ಮನೆಗೆ ಓಡಿದ.

ಬೈರಪ್ಪನ ಕಾಗದ ನೋಡಿ ಪಂಡಿತರು ಗಾಬರಿಯಾದರು. ತಮ್ಮ ಅಧೈರ್ಯವನ್ನು ತೋರುಗೊಡದೆ "ಸಾವಕಾರರೇ – ನಾಳೆ ಕಾರ್ ಸಿದ್ಧ ಗೊಳಿಸಿ – ನಾನು ಕುಲವನಹಳ್ಳಿತನಕ ಹೋಗಿ ಬರುತ್ತೇನೆ" ಎಂದರು.

ಪಂಡಿತರ ಪರಿಚಯ ಬೈರಪ್ಪನಿಗೆ ಪಾಪಣ್ಣನ ಮನೆಯಲ್ಲಾಗಿತ್ತು. ಇದ್ದಕ್ಕಿದ್ದಂತೆ ಅವರು ಬಂದುದನ್ನು ಕಂಡು ಉಪಚಾರ ಮಾಡಿ ಒಳಗೆ ಬರಮಾಡಿಕೊಂಡ. ಹಾಲು ಹಣ್ಣು ತಂದು ಎದುರಿಗಿಟ್ಟು 'ತೆಗೆದುಕೊಳ್ಳಿ ಸ್ವಾಮಿ' ಎಂದು ಬೇಡಿದ ಪಂಡಿತರು 'ಉಹೂ' ಎಂದರು. 'ಶಾನು ಭೋಗರ ಮನೆಯಲ್ಲಿ ಊಟದ ವ್ಯವಸ್ಥೆ ಮಾಡಿಸುತ್ತೇನೆ. ಭೋಜನ ತೀರಿಸಿಕೊಳ್ಳಿ' ಎಂದ. ಪಂಡಿತರು 'ಒಂದು ಪಂಚಪಾತ್ರೆ ಗಂಗಾಮೃತ ಕೂಡ ಮುಟ್ಟಲ್ಲ' ಎಂದು ಖಂಡಿತವಾಗಿ ಹೇಳಿಬಿಟ್ಟರು. ಬೈರಪ್ಪನಿಗೆ ಫಜೀತಿಗಿಟ್ಟುಕೊಂಡಿತು. 'ಈ ಹಾರವಯ್ಯ 'ಪ್ರಾಣಾಚಾರ' ಒಪ್ಪಿಸೋಕೆ ಇಲ್ಲಿಗೆ ಬಂದಿದಾನಲ್ಲಾ' ಅಂದುಕೊಂಡರು.

"ಯಾಕೆ ಸ್ವಾಮಿ ಹೀಗೆ ಮಾಡುತ್ತೀರಿ."

"ಇನ್ನೇನು ಮಾಡಬೇಕು ಗೌಡರೇ. ನೀವು ಮಾಡಿರೋ ಅನ್ಯಾಯಕ್ಕೆ ಮತ್ತೇನು ಮಾಡಬೇಕು ಹೇಳಿ."

"ನಾವು ಏನು ಅನ್ಯಾಯ ಮಾಡಿದ್ದೀವಿ ಸ್ವಾಮಿ."

"ನಮ್ಮ ಅಮ್ಮಯ್ಯ ಏನು ತಪ್ಪು ಮಾಡಿದ್ದಾಳೆ ಹೇಳಿ. ನೀವೂ ರಾಮಯ್ಯ ಏನು ಕಾರಣಕ್ಕೆ ಅವಳನ್ನು ಮನೆಗೆ ಬರಮಾಡಿಕೊಂಡಿಲ್ಲ, ಸೊಗಸಾಗಿ ಮೊಮ್ಮಗ, ಸೊಸೆಯನ್ನು ಬರಮಾಡಿಕೊಂಡು ಸುಖವಾಗಿ

ರೋದು ಬಿಟ್ಟು ಇಲ್ಲದ ಕಾರ್ಪಣ್ಯ ಪಡುತ್ತಿದ್ದೀರಿ. ಹೇಳಿ ಅವಳಾಗಲಿ, ಸಾವಕಾರರಾಗಲಿ ಏನು ಅನ್ಯಾಯ ಮಾಡಿದರು."

"ಆ ಮಾತು ಬೇಡಿ ಸ್ವಾಮಿ. ನಾವು ಆ ಸಂಬಂಧ ಮಾಡಿದ್ದು ನಮ್ಮ ತಪ್ಪು. ಪಾಪಣ್ಣನವರನ್ನು ಏಕೆ ಆಕ್ಷೇಪಿಸೋಣ."

"ನೀವು ವಿಧಿಸುತ್ತಿರೋ ಶಿಕ್ಷೆ ನಿರಪರಾಧಿ ಹೆಣ್ಣಿಗೆ. ಸ್ಪಷ್ಟವಾಗಿ ಹೇಳಿ ಅವಳು ಮಾಡಿದ ಮಹಾಪರಾಧವೇನು?"

"ಹೇಳೋಣೇನು ಸ್ವಾಮಿ."

"ಹೇಳಿ ಅಂತಿದ್ದೀನಲ್ಲಾ."

"ಅವಳ ನೀತಿ ಚೆನ್ನಿಲ್ಲ. ಅವಳು ಹೆತ್ತಿರೋ ಮಗು ನಮ್ಮ ರಾಮಯ್ಯನದಲ್ಲ."

"ಇನ್ನು ಯಾರದು?"

"ಅದು ಅವಳೇ ಹೇಳಬೇಕು."

"ನಿಮ್ಮ ಮಾತಿಗೇನು ಆಧಾರ."

"ಮಗುವನ್ನು ನೋಡಿ. ಅದು ತಾಯಿ ಹಾಗೂ ಇಲ್ಲ–ತಂದೆ ಹಾಗೂ ಇಲ್ಲ."

ಪಂಡಿತರು ಗಹಗಹಿಸಿ ನಕ್ಕುಬಿಟ್ಟರು.

ಬೈರಪ್ಪನ ಮುಖ ಇಂಗುತಿಂದ ಕಪಿ ಹಾಗಾಯಿತು.

"ಏಕೆ ಸ್ವಾಮಿ" ಎಂದು ಕೇಳಿದ.

"ಬೈರಪ್ಪ, ಹಳ್ಳಿಜನ ನಿಮಗೆ ಬುದ್ಧಿಯಿಲ್ಲ ಎಂದು ಹೇಳಿದರೆ ಕೋಪ ಮಾಡಿಕೊಳ್ಳಬೇಡಿ. ಏಳಿ. ನೀವೂ ರಾಮಯ್ಯ ನನ್ನ ಜತೆ ಬನ್ನಿ."

"ಎಲ್ಲಿಗೆ ಸ್ವಾಮಿ."

"ನಾನು ಕರೆದುಕೊಂಡು ಹೋದ ಕಡೆಗೆ."

'ಆಗಲಿ' ಎಂದು ಬೈರಪ್ಪ ಎದ್ದ. ಪಂಡಿತರು ಅವನನ್ನು ಕೂಗಿ 'ಹಾಲು ಹಣ್ಣು ತೆಗೆದುಕೊಂಡು ಬನ್ನಿ' ಎಂದರು. ಬೈರಪ್ಪ ಸಂತೋಷದಿಂದ ಹಾಲು ಹಣ್ಣು ನೀಡಿದ. ಪಂಡಿತರು ಅದನ್ನು ತಿಂದು, ಕುಡಿದು ತೇಗಿದರು.

ಕಾರಿನಲ್ಲಿ ಬೈರಪ್ಪ, ರಾಮಯ್ಯನನ್ನು ಕೂಡಿಸಿಕೊಂಡು ಪಂಡಿತರು ನೇರವಾಗಿ ತಮ್ಮ ಮನೆಗೆ ಬಂದರು.

ಪಂಡಿತರ ಮನೆ, ಅವರ ಔಷಧಗಳ ಕಪಾಟುಗಳು, ಅದಕ್ಕೂ ಹೆಚ್ಚಿನ ಪುಸ್ತಕದ ಕಪಾಟುಗಳನ್ನು ಕಂಡು ಬೈರಪ್ಪ ಬೆರಗಾದ.

'ಈತ ಅಳಲೇಕಾಯಿ ಪಂಡಿತನಲ್ಲವಯ್ಯ. ನಿಜವಾದ ಪಂಡಿತ' ಎಂದು ಮಗನಿಗೆ ಗುಸುಗುಟ್ಟಿದ.

ಪಂಡಿತರು ಪುಸ್ತಕದ ಕಪಾಟಿನಲ್ಲಿ ಕೈಯಾಡಿಸಿ ಒಂದು ದಪ್ಪ ಹೊತ್ತಗೆಯನ್ನು ತೆಗೆದು, ಅದರ ಒಂದು ಪುಟ ಹುಡುಕಿ

"ರಾಮಯ್ಯ. ಇದನ್ನು ಓದು" ಎಂದರು.

"ನೀವೇ ಓದಿ ಅರ್ಥ ಹೇಳಿ ಸ್ವಾಮಿ" ಎಂದ ಬೈರಪ್ಪ.

ಇಂಗ್ಲಿಷಿನ ಮೂಲ ಓದಿ ಪಂಡಿತರು ಅರ್ಥ ವಿವರಿಸಿದರು.

"ಇದು ಬ್ರಿಟಿಷ್ ಮೆಡಿಕಲ್ ಸೊಸೈಟಿ ಜರ್ನಲ್. ಒಂದು ಕೇಸ್ ಕೊಟ್ಟಿದೆ. ಜಾನ್ ಅವನ ಹೆಂಡತಿ ಫಿಲ್ಲಿಸ್ ಬಹಳ ವಿಶ್ವಾಸವಾಗಿದ್ದರು. ಫಿಲ್ಲಿಸ್ ಗರ್ಭಿಣಿಯಾಗಿ ಒಂದು ಮಗು ಹೆತ್ತಳು. ಅದು ಜಾನ್, ಫಿಲ್ಲಿಸ್ ಇಬ್ಬರ ಹಾಗೂ ಇರಲಿಲ್ಲ–ನೀಗ್ರೋ ಹಾಗಿತ್ತು. ಜಾನಿಗೆ ಹೆಂಡತಿಯ ಶೀಲದ ಮೇಲೆ ಅನುಮಾನ ಬಂದು ಡೈವೋರ್ಸ್‌ಗೆ (ದಾಂಪತ್ಯ ವಿಚ್ಛೇದ) ಅರ್ಜಿ ಹಾಕಿದ. ಕೇಸು ವಿಚಾರಣೆಗೆ ಬಂದಾಗ ಪ್ರಸಿದ್ಧ ಕಾಮಶಾಸ್ತ್ರಿಗಳು ತಮ್ಮ ತಮ್ಮ ಅಭಿಪ್ರಾಯ ವ್ಯಕ್ತಮಾಡಿದರು. ನಡೆದುದಿಷ್ಟೇ–ಫಿಲ್ಲಿಸ್ ನಿರಪರಾಧಿನಿ—ವ್ಯಭಿಚಾರಿಣಿಯಲ್ಲ. ಜಾನನ ಮಲಗುವ ಮನೆಯಲ್ಲಿ ಒಂದು ನೀಗ್ರೋ ಚಿತ್ರವಿತ್ತು. ಫಿಲ್ಲಿಸ್ ಅದನ್ನು ನಿತ್ಯ ನೋಡುತ್ತಿದ್ದಳು. ಅದೇ ಚಿತ್ರ ಅವಳ ಗರ್ಭದ ಮೇಲೂ ಮೂಡಿತು. ಹುಟ್ಟಿದ ಮಗು ನೀಗ್ರೋ ಚಿತ್ರದ ಪ್ರತಿರೂಪಾಯಿತು. ಅನುಮಾನ ಪರಿಹಾರವಾಗಿ ಜಾನ್ ತನ್ನ ಡೈವೋರ್ಸ್ ಅರ್ಜಿಯನ್ನು ವಾಪಸು ತೆಗೆದುಕೊಂಡ."

ಬೈರಪ್ಪ, ರಾಮಯ್ಯ ಯೋಚಿಸುತ್ತ ಕುಳಿತರು.

"ನಿನ್ನ ಡೈವೋರ್ಸ್ ಅರ್ಜಿ ವಾಪಸು ತೆಗೆದುಕೊಳ್ಳುತ್ತೀಯೋ ರಾಮಯ್ಯ" ಎಂದರು ಪಂಡಿತರು.

"ಇದೂ ಹಾಗೇ ಆಗಿದೆಯೇ ಸ್ವಾಮಿ" ಎಂದು ಬೈರಪ್ಪ ಕೇಳಿದ.

"ನೋಡಿ ಗೌಡರೇ—ಲಕ್ಷ್ಮಮ್ಮ ನನ್ನ ಮಗು ಇದ್ದಹಾಗೆ. ಅದನ್ನು ನಾನು ಆಡಿಸಿದ್ದೇನೆ. ಬ್ರಾಹ್ಮಣ—ಬ್ರಹ್ಮಗಂಟು ಹಿಡಿದು ಪ್ರಮಾಣ

ಮಾಡುತ್ತೇನೆ. ಹುಡುಗಿ ನಿರಪರಾಧಿ. ಪಾಪಣ್ಣನವರ ಮನೆಗೆ ನಾನೇ ವೈದ್ಯ. ಅವರ ವಹಿವಾಟೆಲ್ಲಾ ನನಗೆ ಚೆನ್ನಾಗಿ ಗೊತ್ತು. ತುಂಬ ಮರ್ಯಾದಸ್ಥ ಜನ. ಪಾಪ ಭೀರುಗಳು. ಅವರಿಗೆ ಸರಿಯಾದ ಮಗಳು ಲಕ್ಷ್ಮಮ್ಮ. ಇನ್ನೂ ಅನುಮಾನವಿದೆಯೇ ಹೇಳಿ ಬಿಡಿ."

"ಏನು ಹೇಳುತ್ತೀಯೋ ರಾಮಯ್ಯ" ಎಂದರು ಗೌಡರು.

"ನೀವು ಹೇಗೆ ಹೇಳಿದರೆ ಹಾಗೆ ಅಪ್ಪಾಜಿ."

"ಈಗ ನಮ್ಮನ್ನು ಏನು ಮಾಡೂಂತೀರಿ ಪಂಡಿತರೇ."

"ಏಳಿ–ನಿಮ್ಮ ಬೀಗರ ಮನೆಗೆ ಹೋಗೋಣ."

ಗೌಡರು ಮರು ಮಾ ತಾ ಡ ದೆ ತಲೆಗೆ ಸಿಂಬಿಯೇರಿಸಿದರು. ರಾಮಯ್ಯನೂ ಎದ್ದ. ಗೌಡರು ಕೈ ಮುಗಿದು

"ಪಂಡಿತರೇ–ನಮ್ಮದು ಅಪರಾಧವಾಯಿತು. ದೊಡ್ಡವರು ನೀವು ಕ್ಷಮಿಸಬೇಕು. ತಪ್ಪು ಕಾಣಿಕೆ ಒಪ್ಪಿಸುತ್ತೇವೆ."

"ತಪ್ಪು ಕಾಣಿಕೆ ಅನ್ನಬೇಡಿ ಗೌಡರೇ. ವಂಶೋದ್ಧಾರಕ ಹುಟ್ಟಿದ್ದಕ್ಕೆ ಉಡುಗೊರೆ ಎಂದು ಹೇಳಿ."

ಎಂದು ಅವರನ್ನು ಕರೆದುಕೊಂಡು ಪಾಪಣ್ಣನಮನೆಗೆ ಕಾರಿನಲ್ಲಿಯೇ ಹೊರಟರು.



# ಮಣ್ಣಿನ ಮಗ

ಭೈರಸಂದ್ರ, ತಿಪ್ಪಳ್ಳಿ, ಒಡ್ಡರಬೈಲು, ಸುಂಕೇನಹಳ್ಳಿ ಎಲ್ಲಾ ಅರ್ಧ ಫರ್ಲಾಂಗ್ ಅಂತರದಲ್ಲಿದ್ದ ಹಳ್ಳಿಗಳು. ಭೈರಸಂದ್ರದ ಕೆರೆಯೇ ದೊಡ್ಡಕೆರೆ. ಅಲ್ಲೇ ಸ್ವಲ್ಪ ತರೀಫಸಲು ಆಗುತ್ತಿತ್ತು. ಉಳಿದ ಕಡೆ ರಾಗಿ. ತರೀಫಸಲು ಬೆಳೆಯುತ್ತಿದ್ದ ಭೈರಸಂದ್ರದ ರೈತರನ್ನು ಕಂಡರೆ ಖುಷ್ಕಿ ಬೆಳೆಯುತ್ತಿದ್ದ ಇತರ ಹಳ್ಳಿಯವರಿಗೆ ಒಂದು ಬಗೆಯ ಗೌರವ. ಭೈರಸಂದ್ರದ ಗೌಡ ರಾಮಯ್ಯ ಆ ಪ್ರದೇಶಕ್ಕೆಲ್ಲಾ ಬಲಿಷ್ಠ. ಎರಡು ಜತೆ ದನಯಿಟ್ಟುಕೊಂಡು ತಾನೇ ಸ್ವಂತ ಆರಂಭಮಾಡಿಸುತ್ತಿದ್ದ. ಅವನ ಅಪ್ಪಣೆಯಿಲ್ಲದೆ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಯಾವ ಶುಭಾಶುಭ ಕೆಲಸವೂ ಆಗುವಂತಿರಲಿಲ್ಲ.

ರಾಮಯ್ಯನ ಮಗ ಸಿದ್ದಯ್ಯನಿಗೂ ತಿಪ್ಪಳ್ಳಿ ಗಂಗನಿಗೂ ಪರಮ ಸ್ನೇಹ. ಇಬ್ಬರೂ ಕೋಳಿ ಸಾಕುವುದರಲ್ಲಿ ನಿಪುಣರು. ಆ ತಾಲ್ಲೂಕಿನಲ್ಲಿ ಯಾವ ಹುಂಜದ ಕಾಳಗವಾದರೂ ಬಹುಮಾನ ಸಿದ್ದ, ಗಂಗ ಇವರ ಪಾಲಾಗುತ್ತಿತ್ತು.

ಗಂಗ ಕೇವಲ ಹಳ್ಳಿಯಲ್ಲಿ ಹುಟ್ಟಿ ಬೆಳೆದ ಆಳು. ಮೈಮುರಿಯ ದುಡಿಯುವುದು, ಹೊಟ್ಟೆ ತುಂಬ ಎರಡೋ ಮೂರೋ ಗೋಳ (ರಾಗಿ ಮುದ್ದೆ) ಕತ್ತರಿಸುವುದು, ವಿರಾಮವೇಳೆಯಲ್ಲಿ ಹುಂಜಕ್ಕೆ ಜಗಳ ಕಾಯು ವುದನ್ನು ಕಲಿಸುವುದರಲ್ಲಿ ಅವನ ಜೀವನ ಸಾಗಿತ್ತು. ಸಿದ್ದ ಆಗಾಗ್ಗೆ ತಂದೆ ಜತೆ ಬೆಂಗಳೂರು, ಮೈಸೂರಿಗೆ ಹೋಗಿ ಬಂದಿದ್ದ. ಬೆಂಗಳೂರಿನ ಕರಗ, ಮೈಸೂರಿನ 'ಫ್ಲೋಜು' ಕಂಡುಬಂದಿದ್ದ. ಅವನ ಬಾಯಲ್ಲಿ ಅವುಗಳ ವರ್ಣನೆ ಕೇಳುವುದೆಂದರೆ ಗಂಗನಿಗೆ ಇರುಳು ಹಗಲಾಗುತ್ತಿತ್ತು ; ಹಗಲು ಇರುಳಾಗುತ್ತಿತ್ತು.

ಗಂಗನಿಗೆ ಸ್ವಂತ ಹೊಲಭೂಮಿ ಇರಲಿಲ್ಲ. ಅವನು ಮಾಡುತ್ತಿದ್ದುದು ಅಯ್ಯನವರ ಹೊಲ. ವರ್ಷಾಕಾಲಕ್ಕಾಗುವಷ್ಟು ದವಸ ಬೆಳೆಯುತ್ತಿತ್ತು. ಅವನು ಬೆಳೆದ ಒಂದಂಶ ಧಣಿಗೆ ಹೋಗುತ್ತಿತ್ತು. ಆಗಾಗ್ಗೆ ಸೌದೆ, ಸಾಲುಮರದ ಮಾವಿನಕಾಯಿ, ಸೀಗೇಮೆಳೆಯ ಸೀಗೇಕಾಯಿ ಧಣಿಯವರ ಮನೆಗೆ ಕಳುಹಿಸುತ್ತಿದ್ದ. ಗಂಗನ ಧಣಿ ಬೆಂಗಳೂರಿನಲ್ಲಿ ಸರ್ಕಾರಿ ನೌಕರಿ ಯಲ್ಲಿದ್ದರು. ಈ ಜಮೀನಿನ ಆದಾಯ ಅವರು ಗಣನೆಗೇ ತಂದು ಕೊಂಡಿರಲಿಲ್ಲ. ಕಂದಾಯ ಕಳೆದು ಒಂದೋ ಎರಡೋ ಮೂಟೆ ದವಸ ಮನೆಗೆ ಬಂದುಬಿದ್ದರೆ ಅವರಿಗೆ ಅತ್ಯಾನಂದವಾಗುತ್ತಿತ್ತು. ಪಿತ್ರಾರ್ಜಿತ ಆಸ್ತಿ, ಇರಲಿ ಎಂದು ಸುಮ್ಮನಿದ್ದರು. ಗಂಗ ಭೂಮಿ ಮಾಲಿಕನಾಗಿರ ದಿದ್ದರೂ, ಮಾಲಿಕತನದ ಎಲ್ಲ ಸೌಕರ್ಯಗಳೂ ಅವನಿಗಿದ್ದವು.

ಗಂಗನಿಗೆ ತಾಯಿ ಬಿಟ್ಟು ಯಾರೂ ದಿಕ್ಕಿಲ್ಲ. ಮುದುಕಿ ಮಗನನ್ನು ಕಾಡಿಕಾಡಿ ಕೊನೆಗೆ ಅವನಿಗೆ ಕೂಡ್ಲಿ ಮಗಳು ತಿಮ್ಮಿಯನ್ನು ಲಗ್ನಮಾಡಿಸಿ ದ್ದಳು. ತಿಮ್ಮಿ ಗಂಗನ ಜತೆಗೂ ದುಡಿದು ತನ್ನ ಅನ್ನ ತಾನು ಹುಟ್ಟಿಸಿ ಕೊಳ್ಳುತ್ತಿದ್ದಳು.

ಗಂಗ ಕಂಡಿದ್ದ ಪುಟ್ಟ ಜಗತ್ತಿನಲ್ಲಿ ಅವನು ಸುಖಿಯೆಂದೇ ಹೇಳ ಬೇಕು. ವರ್ಷಕ್ಕೊಮ್ಮೆ ಶಿವಗಂಗೆ ಪರಶೆಗೆ ಹೋಗಿ ಬಂದರೆ, ಒಡ್ಡರ ಬೈಲಿನ ಬಯಲು ನಾಟಕ ನೋಡಿಬಂದರೆ ಅವನ ವಿಹಾರ ಮುಗಿಯು ತ್ತಿತ್ತು. ಒಂದು ವರ್ಷ ಅವನ ಹುಂಜ ಶಿವಗಂಗೆ ಪರಶೆಯಲ್ಲಿ ಸೀಬೆತೋಪಿ ನವರ ಹುಂಜ ಹೊಡೆದಮೇಲೆ ಗಂಗ ಹೆಂಡತಿಗೆ ಒಂದು ಜತೆ ಬೆಳ್ಳಿಕಡಗ

ತಂದಿದ್ದ. ಆದರಿಂದ ಅವನಿಗೆ ಸ್ವಲ್ಪ ಜಂಭವೂ ಬಂದಿತ್ತು. ನಾಲ್ಕು ದಿವಸ ಹೆಂಡತಿ ಮುಂದೆ ಎದೆಯುಬ್ಬಿಸಿಕೊಂಡು ಮಾತನಾಡುತ್ತಿದ್ದ. ತಾಯಿ ಅವನ ತಲೆಯ ಮೇಲೆ ಮುಟ್ಟಿ 'ಮುಕ್ಕ, ಒಂದು ಜತೆ ಕಡಗ ತಂದು ಮೆರೀತಾನೆ' ಅಂದು ಅವನನ್ನು ಹತೋಟಿಗೆ ತಂದಳು.

ಒಂದು ದಿನ ಸಂಜೆ ಹೊಲದಿಂದ ಬಂದು ಗಂಗ ಎಮ್ಮೆ ಮೈತೊಳೆಯುತ್ತ ನಿಂತಿದ್ದ. ರಾಮಯ್ಯ ಅವಸರದಲ್ಲಿ ಬರುತ್ತಿರುವುದು ಕಂಡಿತು.

"ಏನು ಗೌಡರೇ—ಈಸು ದೂರ."

"ಏನಿಲ್ಲ ಗಂಗಣ್ಣ—ಸಿದ್ದನ್ನ ಕಂಡಿದ್ಯಾ."

"ಇಲ್ವೇ....ಅಟ್ಟೇಲಿಲ್ವಾ."

"ಇಲ್ಲಪ್ಪಾ."

"ಒಲದ ಕಡೆ ಓಗವ್ನೋ ಏನೋ?"

"ಎಲ್ಲಿ ಉಡುಕ್ಸಿದ್ರೂ ಸಿಕ್ಕಿಲ್ಲವಯ್ಯಾ."

"ಅಂಗಾದ್ರೆ ಎಲ್ಲಿಗೋದ."

"ನೋಡು ಗಂಗಣ್ಣ—ನಿಂಗೇನಾದ್ರ ಸಿಕ್ಕಿದ್ರೆ ತಿಳ್ಸು."

"ಅದ್ಕೇನಂತಾ."

ಎಂದ. ಮೂರು ನಾಲ್ಕು ದಿವಸ ಸಿದ್ದಯ್ಯನ ಪತ್ತೆ ಸಿಗಲೇ ಇಲ್ಲ. ಒಂದು ದಿನ ಗೌಡರೇ ಮತ್ತೆ ಗಂಗನನ್ನು ಹುಡುಕಿಕೊಂಡು ಬಂದರು. ಅವರ ಮುಖದಲ್ಲಿ ತೇಜಸ್ಸಿರಲಿಲ್ಲ. ಕಣ್ಣುಗಳು ಕಾಂತಿಹೀನವಾಗಿದ್ದವು. ನೋವಿನ ಘಾತದಿಂದ ದೇಹ ಕಳೆಗುಂದಿತ್ತು. ಗಂಗನನ್ನು ಕಂಡಕೂಡಲೆ ಗೌಡರು 'ಗೊಳೋ' ಎಂದು ಮಕ್ಕಳಹಾಗೆ ಅಳುವುದಕ್ಕೆ ಮೊದಲಿಟ್ಟರು. ಗೌಡರ ಕಣ್ಣಲ್ಲಿ ನೀರನ್ನು ಗಂಗನೇ ಆಗಲಿ, ಇತರರೇ ಆಗಲಿ ಕಂಡುದು ಅದೇ ಮೊದಲು. ಗಂಗನ ತಾಯಿ ಸಮಾಧಾನ ಹೇಳಿದಳು.

"ಏನಾಯ್ತು—ರಾಮಪ್ಪಾ. ಏಳು, ಅಳೋದ್ಯಾಕೆ. ಸಿದ್ದಣ್ಣ ಚಿಕ್ಕದ್ನಾ."

"ಏನೇಳ್ಲಿ ಅಮ್ಮಿ....ಒಬ್ನೇ ಮಗಾಂತ ಬಾಳೇಹಣ್ಣಿನ ಗುಡಾಣದಲ್ಲಿ ಬೆಳಸ್ದೆ....ಈಗ ಕೈಕೊಟ್ಟ."

"ಏನಾದ್ನಪ್ಪಾ...."

"ಫೋಜ್ ಸೇರ್ಬಿಟ್ನಂತವ್ವಾ—ಸೋಜರ್ ಆಗವ್ನೆ."

"ಅಯ್ಯೋ ಮುನೀಸ್ವರಾ...."

"ಸೋಜರ್ ಆದ್ರೆ ಏನಾಯ್ತು ಗೌಡ್ರೆ."

ಎಂದು ಗಂಗ ತನ್ನ ಮುಗ್ಧರೀತಿಯಲ್ಲಿ ಕೇಳಿದ.

"ಏನಾಯ್ತೇ....ಮನೆ ಆಳಾಯ್ತು....ಅವನ್ನ ಇಲಾಯ್ತೀಗೆ ಕಳಿಸ್ತಾರೆ....ಅಂದಿ ಎಗ್ಗಣ ತಿನಿಸ್ತಾರೆ....ಜಾತಿ ಕೆಡಸ್ತಾರೆ....ಇನ್ನ ಕುಲಸ್ತರು ಸೇರಿ ಅವನ್ನ ಒರಗೆ ಕಳಿಸ್ತಾರೆ...."

"ಅದ್ಯಾಕೆ ಅಂಗೆ ಮಾಡೋಕೋದ ಐದ."

"ದುಡ್ಡಿನಾಸೆ ಗಂಗಣ್ಣಾ....ಕೈತುಂಬ ಸಂಬಳ ಕೊಡ್ತಾರಂತೆ...."

"ದುಡ್ಡಿಗೆ ಕಿಚ್ಚಿಟ್ರು....ನಿಮ್ಗೆ ದ್ಯಾವ್ರು ಯಾವದು ಕಡ್ಮೆ ಮಾಡವ್ನೆ."

"ಕಾಲ ಕೆಟ್ಹೋಯ್ತು ರಾಮಪ್ಪ. ಐದಗೋಳು ನಮ್ಮ ಮಾತು ಕೇಳಾಕಿಲ್ಲ." ಎಂದು ತಾಯಿ ಹೇಳಿದಳು.

"ಯಾಕಮ್ಮ....ನಿನ್ನ ಮಾತು ನಾನು ಕೇಳಾಕಿಲ್ವಾ."

"ಮಜ್ಜಿಗೆ ನೀರು ಕುಡ್ಕೊಂಡೋಗು ರಾಮಪ್ಪಾ." ಎಂದಳು.

"ಏನೂ ಬ್ಯಾಡಮ್ಮ....ಐದ ಒಟ್ಟಿಗೆ ಆಲು ಆಕವ್ನೆ" ಎಂದು ರಾಮಯ್ಯ ಕಾಲೆಳೆದುಕೊಂಡು ಮನೆಯ ಕಡೆ ಹೊರಟ.

ಮಗನ ಮೇಲೆ ರಾಮಯ್ಯನ ಕೋಪ ಬಹಳ ದಿವಸ ಉಳಿಯಲಿಲ್ಲ. ಸಿದ್ದಣ್ಣ ಪ್ರತಿತಿಂಗಳೂ ತಪ್ಪದೆ ತಂದೆಗೆ ಹಣ ಕಳುಹಿಸುತ್ತಿದ್ದ. ಆ ಸುದ್ದಿಯನ್ನು ರಾಮಯ್ಯ ಊರು ಊರಿನಲ್ಲಿ ಪ್ರಚಾರಮಾಡಿ ತನ್ನ ಮಗನ ಕಲ್ಯಾಣಗುಣವನ್ನು ಚಿತ್ರವತ್ತಾಗಿ ವರ್ಣಿಸಿದ.

ಆರು ತಿಂಗಳುರುಳಿದವು. ಸಿದ್ದಣ್ಣ ಊರಿಗೆ ಬಂದ ಸುದ್ದಿ ಗಂಗಣ್ಣನ ಕಿವಿ ಮೇಲೆ ಬಿತ್ತು. 'ಅಳೀ ನ್ಯಾಸ್ತ' ನನ್ನು ನೋಡಿ ಬರಲು ಹೊರಟ.

ಸಿದ್ದಣ್ಣನಲ್ಲಾಗಿದ್ದ ಮಾರ್ಪಾಟನ್ನು ಕಂಡು ಗಂಗ ಬೆರಗಾದ. 'ಇವ ನಮ್ಮ ಸಿದ್ದನೇ' ಎಂದು ಮೂಗಿನಮೇಲೆ ಬೆರಳಿಟ್ಟುಕೊಂಡ. ಸಿದ್ದ ಎದ್ದುಬಂದು 'ಬಾರ್ಲೇ' ಎಂದು ಅಪ್ಪಿ ಒಳಕ್ಕೆಳೆದೊಯ್ದಾಗಲೇ ಎಚ್ಚರ.

ಗಂಗ ಸಿದ್ದನನ್ನು ದಿಟ್ಟಿಸಿನೋಡಿದ. ರಮಡೋಲ್ ಕ್ಷೌರದ ಹಿಂದಿದ್ದ ಗಂಟುಜುಟ್ಟು ಮಾಯವಾಗಿತ್ತು. ಅದರ ಬದಲು ಕ್ರಾಪು, ಮುಖಕ್ಷೌರ.

ಚೆಲುವೆಯಾದ ಅರಿವೆ. ಚಲ್ಲಣ, ಕೋಟು, ಮೋಜು. ಸಿದ್ದಯ್ಯ ಅರಸು ಮಗನ ಹಾಗಿದ್ದ. ಅವನಲ್ಲಾಗಿದ್ದ ಮಾರ್ಪಾಟು ಗಂಗನಲ್ಲಿ ಏನೇನೋ ಭಾವನೆಗಳನ್ನು ಕೆರಳಿಸಿದವು.

ಸಿದ್ದಯ್ಯ ತಾನು ಫೌಜು ಸೇರಿದ್ದು, ಅಲ್ಲಿ ಕವಾಯತು ಮಾಡುವುದು, ತುಪಾಕಿ ಹಿಡಿದು ಗುರಿ ಹೊಡೆಯುವುದು, ದಿನ್ನಾ ಸಿನೀಮಾ ನೋಡುವುದು, ಹೋಟಲಿನಲ್ಲಿ ರುಚಿರುಚಿಯಾದ ತಿಂಡಿ ತಿನಿಸುಗಳನ್ನು ತಿನ್ನುವುದು ಎಲ್ಲವನ್ನೂ ವರ್ಣಿಸಿ

"ನನ್ನ ರಜಾ ಕಳಿಯುತ್ಲೂ ಇಲಾಯಿತೀಗೆ ಕಳಿಸ್ತಾರಂತೆ ಗಂಗಾ. ಪರಂಗ್ಯೋರ ಊರೆಲ್ಲಾ ಕಾಸು ಕರ್ಚಿಲ್ಲದೆ ನೋಡಿಕೊಂಡು ಬರುತ್ತೇನೆ"

"ಅಂಗಾ. . . ."

"ಅಂಗಲ್ಲದೆ ! ಇಲ್ಲೇನೈತ್ಲೆ—ಸುಡುಗಾಡ ಹೊಲ—ಗೊಬ್ಬರ ಗೋಡು—ಕತ್ತೆ ಅಂಗೆ ದುಡಿಯೋದು. . . ."

"ಅಂಗನ್ನಬಾರದು ಸಿದ್ದಣ್ಣ—ಒಲ ಗೊಬ್ಬರಾನೇ ನಮಗೆ ಶಾಸ್ವಿತ —ಬೂಮ್ತಾಯಿ. . . . ಈಟು ದಿನ್ನ ಅನ್ನಕೊಟ್ಟು ಕಾಪಾಡವ್ಳೆ. . . ."

"ಓಗ್ಲೇ . . . ಗಮ್ಮಾರಾ . . . ತಿಂಗಳಿಗೆ ಈಗ ೪೫ ರೂಪಾಯಿ ಸಂಪಾದಿಸ್ತೀನಿ . . . ಇನ್ನೆರಡು ತಿಂಗಳಿಗೆ ೬೦ . . . ನೋಡು ವರ್ಸಾ ಎರಡು ವರ್ಸದಲ್ಲಿ ಸಾವಿರಾರು ರೂಪಾಯ ತರದೇಯಿದ್ದರೆ. . . ."

"ಅಂಗಾ . . ."

"ಅಲ್ಲಿ ಇಂಗ್ರೇಜಿ ಕಲಿಸ್ತಾರೆ . . . ಸೋಜರೆಲ್ಲಾ ಮುಸಲ್ಮಾನಿ ಮಾತಾಡ್ತಾರೆ. . . ."

"ನಿಂಗೂ ಬತ್ತದಾ ಸಿದ್ದಣ್ಣ."

"ಓಟು ಓಟು."

"ಎಲ್ಲಿ ಒಸಿ ಮಾತಾಡು."

"ನೀನು ಇಲ್ಲಿ ಕುಂದ್ರು . . . ನೀನೇ ಸುಬೇದಾರ್—ಸಿಪಾಯ್ ಎಂತ ಕೂಗು."

"ಸಿಪಾಯ್. . . ."

"ಸಾರ್. . . ."

“ಮುಂದೇನು ಏಳ್ಬೇಕು ಸಿದ್ದಣ್ಣ.”

“ಚಾಯ್ ಲಾವ್!”

“ಚಾಯ್ ಲಾವ್!”

“ಆರ್‍ರೈಟ್ ಸಾಬ್.”

“ಒಳ್ಳೇ ಪರಂಗಿರೋರಂಗೆ ಮಾತಾಡ್ತಿ ಸಿದ್ದಣ್ಣ.”

“ಔದ್ಲೇ . . . ನಾನೇನು ಉಡಾಫೆ ಓಡಿತೀನೀಂತ ಅಂದ್ಕೊಂಡ್ಯೇನು?”

“ಬಟ್ಟೆಯೆಲ್ಲಾ ಅವರೇ ಕೊಡ್ತಾರೇ?”

“ಊ! ಬಟ್ಟೆ—ಊಟ....ಮಲಗೋಕೆ ಮಂಚ ಎಲ್ಲಾ ಪುಕಸಟ್ಟೆ ಸಿಕ್ಕುತ್ತೆ.”

“ಮಂಜಾನೂ.”

“ಇದ್ನೋಡು.”

ಎಂದು ತನ್ನ ಕಿಸೆಯಿಂದ ಒಂದು ಸಿಗರೇಟ್ ಪ್ಯಾಕೆಟ್ ತೆಗೆದು ಒಂದು ಸಿಗರೇಟು ಎಳೆದು ಗಂಗನ ಬಾಯಿಗಿಟ್ಟು ತಾನೊಂದು ಹಚ್ಚಿದ.

“ಪಸಂದಾಗೈತಲ್ಲಣ್ಣ.”

“ಅದೂ ಪುಗಸಟ್ಟೆ.”

“ಫೋಜೂಂದ್ರೆ ಏನೋಂತಿದ್ದೆ—ಅದೇ ವೈಕುಂಟ.”

“ಇನ್ನೇನೂಂತ ತಿಳಿದೆ—ಗಂಗಾ, ನೀನೂ ಬಂದ್ಬಿಡ್ಲೇ—ಇಬ್ರೂ ಜತೇಲಿ ಇದ್ರೆ ಚಂದಾಕಿರತೈತೆ.”

“ಮುದುಕಿ ಬಡ್ಕೊಂತೈತೆ.”

“ನಾಕು ದಿವ್ಸ. ನೀನು ಚಂದಾಕಿ ಅಣ ಕಳ್ಸಿದ್ರೆ ಸಂತೋಸವಾಗತ್ತೆ. ಆಯ್ಯ ಮೊದ್ಲು ಕಾಗಜ ಬರ್ದಾಗ ‘ಮನೇಗೆ ಬಾ ಯವ್ವಾರ ಆಡ್ತೀನಿ’ ಅಂತ ಎದರಿಸ್ದ. ಈಗ ಕುಷಿಯಾಗಿ ಓಗವ್ನೆ—ಏಸುದಿನ ಇಂಗೆ ಜೀತ ಮಾಡೋದೆ. ನಾವೂ ಸುಖವಾಗಿರಬ್ಯೇಡ್ವಾ.”

“ಯೋಸ್ನೆಮಾಡ್ತೀನಪ್ಪಾ—ನೀನು ಎಂದು ಒಲ್ಡ್ತಿ?”

“ಇನ್ನೂ ಒಂದು ವಾರ ಟೇಮ್ ಇದೆ ಬುಡು.”

“ಅಂಗಾರೆ ಸರಿ.”

"ನಾಳೆ ಅತ್ತಲೇ ಬಂದ್ಬುಡು—ಕೋಳೀ ಮಾಡಿಸ್ತೀನಿ."

"ಆರೈಟ್" ಎಂದ.

ಗಂಗನಿಗೆ ರಾತ್ರಿ ನಿದ್ರೆ ಹತ್ತಲಿಲ್ಲ. ಸಿದ್ದಯ್ಯನ ಮಂತ್ರ ಚೆನ್ನಾಗಿ ನಾಟಿತ್ತು. ಹಾಸಿಗೆ ಮೇಲೆ ಹೊರಳಾಡುತ್ತಿದ್ದ. ತಿಮ್ಮಿ ಹತ್ತಿರ ಬಂದು ನೇವರಿಸಿ 'ಯಾಕೆ—ನಿದ್ದೆ ಬರಾಕಿಲ್ವಾ' ಎಂದಳು. 'ನಿಂಗೆ ಯಾಸಾಟಿಕೆ ಓಗಿ ಬಿದ್ಕೊಳ್ಳೆ' ಎಂದು ಗದರಿದ. ಅವನ ಮನಸ್ಸು ಅಲ್ಲಕಲ್ಲೋಲ ವಾಗಿತ್ತು. ಸಿದ್ದಣ್ಣ ಹೇಳಿದ್ದು ಅಕ್ಷರಶಃ ನಿಜವಾಗಿತ್ತು. ಸುಖವಾಗಿ ಗೌಡರ ಮನೆಯಲ್ಲಿ ರಾಜಕುಮಾರನಂತೆ ಬೆಳೆಯುತ್ತಿದ್ದ ಸಿದ್ದಣ್ಣನಿಗೇ ಇದು ಜೀತದ ಬಾಳು ಎನಿಸಿದ್ದಾಗ ಗಂಗನಿಗೆ ಹೇಗಾಗಿರಬಹುದು?

ತನ್ನ ಬಾಳಿನಲ್ಲಿ ಅವನಿಗೆ ಇದ್ದಕ್ಕಿದ್ದಂತೆ ಅಸಹ್ಯ ಹುಟ್ಟಿತು. ವರ್ಷಾ ಕಾಲ ಬೆಳಿಗ್ಗೆಯಿಂದ ಸಂಜೆವರೆಗೆ ದುಡಿದರೂ ಸಿಕ್ಕುವುದು ನಾಲ್ಕು ಕಾಳು ರಾಗಿ. ಮಳೆ ತಪ್ಪಿಹೋದರಂತೂ ದೇವರೇಗತಿ. ಅಂತಹ ದುರ್ದಿನಕ್ಕೆ ಸಿದ್ಧತೆ ಮಾಡಿಕೊಳ್ಳಬೇಕು. ಕೈಯಲ್ಲಿ ನಾಲ್ಕುಕಾಸು ಮಾಡಿಕೊಳ್ಳಬೇಕು.

ಮುದುಕಿ ಬಡಿದುಕೊಳ್ಳುತ್ತಾಳೆ. ತಿಮ್ಮಿ ಸೆಟೆದುಗೊಳ್ಳುತ್ತಾಳೆ. ಅವರನ್ನು ಒಪ್ಪಿಸುವುದು ಹೇಗೆ? ಒಪ್ಪಿಸುವ ಮಾತು ಸುಳ್ಳು—ಸಿದ್ದಣ್ಣನ ದಾರಿಯೇ ದಾರಿ. ಹೇಳದೇ ಕೇಳದೆ ಹೊರಟು ಹೋಗಿ ಬಿಡಬೇಕು.

ಮುದುಕಿ ಆ ಕೊರಗಿನಲ್ಲಿ ಸತ್ತುಹೋದರೋ? ಗಂಗನ ಕಣ್ಣು ಹನಿಗೂಡಿತು—ಗಂಭೀರವಾದ ಮುಖದಿಂದ ಒಂದೆರಡು ಕಂಬನಿಗಳು ಜಾರಿದವು. ತಿಮ್ಮಿಗೂ ನಿದ್ರೆ ಬಂದಿರಲಿಲ್ಲ. ಬುಡ್ಡಿಯ ನಸುಬೆಳಕಿನಲ್ಲಿ ಗಂಡನ ಕಣ್ಣಿನಿಂದಿಳಿಯುತ್ತಿದ್ದ ಕಿರುಗಾಲವೆಯನ್ನು ಕಂಡಳು. ಮೆಲ್ಲನೆ ಪಕ್ಕಕ್ಕೆ ಹೊರಳಿ ಗಂಗನ ಮೇಲೆ ಕೈ ಬೀಸಿದಳು. ಗಂಗ ಅವಳನ್ನು ಭರಸೆಳೆದು ಅಪ್ಪಿಕೊಂಡ.

ಮಾರನೆಯ ದಿವಸ ಚೆನ್ನಾಗಿ ಮೈತುಂಬಿ ನಿಂತಿದ್ದ ಕೋಳಿ ಯೊಂದನ್ನು ಕೊಚ್ಚಿ ಮುದುಕಿ ಸಾರುಮಾಡಿ ಗಂಗನಿಗೂ ಸಿದ್ದಣ್ಣನಿಗೂ ಉಣಬಡಿಸಿದಳು. ಊಟಮಾಡುತ್ತಿದ್ದಾಗ ಗಂಗ

"ಅವ್ವಾ . . ." ಎಂದ.

"ಏನಪ್ಪಯ್ಯ."

"ಸಿದ್ದಣ್ಣ ಏನೋ ಏಳ್ತಾನೆ."

"ಏನು ಮರಿಗೌಡ."

"ಏನೂ ಇಲ್ಲ ಅವ್ವ. ನಾಕು ದಿವ್ಸಾ ಗಂಗಣ್ಣನ ಕಳಿಸ್ತೀಯಾ. ಅವನೂ ಫೋಜು ನೋಡ್ಕೊಂಡು ಬತ್ತಾನೆ."

"ಏನ್ಲೇ—ನೀ ಕೆಟ್ಟದ್ದಲ್ಲದೆ ಗಂಗನ್ನೂ ಕೆಡಿಸ್ತೀಯಾ—ನಮಗ್ಯಾಕ ಫೋಜು. ಭೂಮಿತಾಯಿ ಅನ್ನ ಕೊಡ್ತಾಳೆ—ಉಣ್ಕೊಂಡು ಗೆಯ್ಕೊಂಡು ಸುಕವಾಗಿರೋದ ಬುಟ್ಟುಬುಟ್ಟು."

"ಫೋಜು ಸೇರಲ್ಲ ಅವ್ವ. ಬೆಂಗ್ಳೂರಲ್ಲಿ ನಾಕು ದಿವಸ ಜತೇಲಿದ್ದು ಬಂದುಬುಡ್ತಾನೆ. ನಾನು ಆಮೇಲೆ ದೂರಾ ಇಲಾಯ್ತಿಗೆ ಓಗ್ತಿನಿ-ಒಂದೆಲ್ಡು ವರ್ಸ ಬರಾಕಿಲ್ಲ. ನ್ಯಾಸ್ತ ನಾಕ್ದೀಸ ಜತೇಲಿರ್ಲಿಂತ ಆಸೆ ಆಗ್ತೈತೆ."

"ಇದೆಲ್ಲಾ ಚೆಂದಾಕಿಲ್ಲಪ್ಪ ಸಿದ್ದಣ್ಣ" ಎಂದಳು ಮುದುಕಿ.

"ಸುಮ್ನೆ ಓಗ್ಬರ್ತೀನಿ ಅವ್ವಾ—ನಂಗೂ ಬ್ಯಾಸರ ಬಂದೈತೆ. ಸಿದ್ದಣ್ಣ ಇಲ್ದೆ ಜೀವಕ್ಕೆ ಒಂದು ತರಾ ಆಗ್ತೈತೆ."

"ಏಸು ದೀಸಕ್ಕೆ ಬತ್ತೀ."

"ನಾಕೈದು ದೀಸ ಅಷ್ಟೇ. . . ."

"ಏನಾರೂ ಮಾಡ್ಕೊ . . . ಮಳೆ ಬಂದ್ರೆ ಉಳೋರ್ಯಾರು ? "

"ಮಳೆ ಮುಕ ಕಂಡ ಕೂಡ್ಲೆ ಬತ್ತೀನಿ . . . ಅಲ್ಲಿ ಯಾಸಾಟೀಗೂ ನಿಲ್ಲಾಕಿಲ್ಲ."

ಎಂದು ತಾಯಿಗೆ ಭರವಸೆಯಿತ್ತ. ಗಂಗ, ಸಿದ್ದರ ಮುಸಲತ್ತು ಮುದುಕಿಗೆ ಅರ್ಥವಾಗಲಿಲ್ಲ.

ಅವರು ಹೊರಡುವ ದಿನ ರಾಗಿ ರೊಟ್ಟಿಮಾಡಿ ಮುದುಕಿ ಬುತ್ತಿ ಕಟ್ಟಿಕೊಟ್ಟಳು. ಇಬ್ಬರೂ 'ಬಸ್' ನಿಲ್ಲಿಸಿ ಅದರಲ್ಲಿ ಬೆಂಗಳೂರಿಗೆ ಹೊರಟರು. ಸಿದ್ದಯ್ಯನೇ ಬಸ್‌ನವರಿಗೆ ದುಡ್ಡನ್ನು ಫೇಕಿದ.

ನಾಲ್ಕೈದು ದಿವಸ ಕಳೆದು ಹೋದವು. ಎರಡು ನಾಲ್ಕೈದು ದಿವಸವೂ ಸಾಗಿಹೋಯಿತು. ಗಂಗನ ಸುದ್ದಿಯಿಲ್ಲ. ಮುದುಕಿ

ರಾಮೇಗೌಡರ ಮನೆ ಮುಂದೆ ಹೋಗಿ ಸಿದ್ದನಿಗೆ ಶಾಪಾಹಾಕಿ ಬಾಯಿ ಬಡಿದುಕೊಂಡಳು. ಮಗ ಮನೆಗೆ ಬರುವ ಲಕ್ಷಣ ಕಾಣಲಿಲ್ಲ.

ಮುದುಕಿ ಕೊರಗಿನಲ್ಲಿ ಹಾಸಿಗೆ ಹತ್ತಿ ಮಲಗಿಕೊಂಡಳು. ಅವಳ ಆರೈಕೆಯಲ್ಲಿ ತಿಮ್ಮಿ ದನಕರುಗಳನ್ನು ದುರ್ಲಕ್ಷಿಸಿದಳು. ಜತೆ ಎತ್ತಿನಲ್ಲಿ ಒಂದು ಘವತಿ ಆಯ್ತು. ಅದನ್ನು ಕಂಡ ಮೇಲಂತೂ ಮುದುಕಿ ಭೂಮಿ ಹಿಡಿದಳು. ಯಾರೆಷ್ಟು ಸಮಾಧಾನ ಹೇಳಿದರೂ ಅವಳ ದುಃಖ ಕಡಿಮೆಯಾಗಲಿಲ್ಲ.

ಎರಡು ತಿಂಗಳು ಕಳೆದವು. ಒಂದು ದಿನ ಟಪಾಲಿನವನು ಮುದುಕಿಗೆ ಒಂದು ಕಾಗದ, ಇಪ್ಪತ್ತು ರೂಪಾಯಿ ಮನಿಯಾರ್ಡರ್ ತಂದುಕೊಟ್ಟ. ಅವನ ಕೈಯಲ್ಲೇ ಅದನ್ನು ಓದಿಸಿ ಕೇಳಿದಳು; ಅವಳ ಅನುಮಾನ ಸತ್ಯವಾಯಿತು. ಗಂಗನೂ 'ಫೋಜ್' ಸೇರಿದ್ದ. ಪುಣೆಯಿಂದ ತಾಯಿಗೆ ಕಾಗದ ಬರೆದು ಹಣ ಕಳಿಸಿದ್ದ.

ಫೋಜ್ ಸೇರಿದಾಗ ಸಿದ್ದಣ್ಣ ಕೊಟ್ಟಿದ್ದ ಭರವಸೆ ಸಾರ್ಥಕವಾಗಲಿಲ್ಲ. ಸಿದ್ದಣ್ಣನನ್ನು ಎಲ್ಲಿಗೋ ಹೊತ್ತು ಹಾಕಿದ್ದರು. ಗಂಗಣ್ಣ ಪುಣೆಗೆ ಹೋಗಬೇಕಾಯಿತು. ಮೂರು ನಾಲ್ಕು ತಿಂಗಳು ಗಂಗ ತನ್ನ ಪಾಡನ್ನು ನೆನೆದುಕೊಂಡು ಹಲುಬಿದ. ಆದರೆ ಸೈನ್ಯದ ಬಾಳು, ಹೊಸ ಸ್ನೇಹ, ಕೈತುಂಬ ಖರ್ಚಿಗೆ ಹಣ, ಮೈತುಂಬ ಖಾಕಿ ಅರಿವೆ, ದಿನಾ ಸಿನೀಮಾ ಅವನ ದುಃಖವನ್ನು ದೂರಮಾಡಿದವು. ಊರಿಗೆ ತಪ್ಪದೆ ಹಣ ಕಳುಹಿಸಿ ಕಾಗದ ಬರೆಸುತ್ತಿದ್ದ. ಆದರೆ ರಜ ಬಂದಾಗಲೂ ಊರಿಗೆ ಹೋಗಿಬರುವ ಧೈರ್ಯ ಮಾಡಲಿಲ್ಲ. ಊರಿಗೆ ಹೋದರೆ ಹಿಂದಿರುಗುವುದಕ್ಕೆ ಮುದುಕಿ ಬಿಡುವುದಿಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು.

ಗಂಗ ಬರುತ್ತಾನೆ—ಬರುತ್ತಾನೆ ಎಂದು 'ಅಯ್ನೋರು' ಒಂದು ವರ್ಷ ಕಾದರು. ಅವನ ಸುಳಿವು ಕಾಣದಿರಲು ಹೊಲ ಮಾಡುವುದಕ್ಕೆ ಬೇರೆಯವರಿಗೆ ಒಪ್ಪಿಸಿದರು. ಮುದುಕಿ, ತಿಮ್ಮಿ ಅಲ್ಲೇ ಇರುವುದಕ್ಕೊಪ್ಪಿದರು.

ಗಂಗನಲ್ಲಿ ವಿಶೇಷ ಮಾರ್ಪಾಟು ತಲೆದೋರಿತು. ಸಿದ್ದಣ್ಣನಿಗಾಗಿದ್ದ ಕ್ರಾಪು, ಮೋಜಿನ ಮಾರ್ಪಾಟಿನ ಜತೆಗೆ ಸಿಲ್ಕ್ ವಸ್ತ್ರ, ಸೆಂಟು, ಇತರ

ಪೋಕಿ ಸಾವಾಸು ಅವನನ್ನಪ್ಪಿಕೊಂಡವು. ಹೋಟಲಿಗೆ ಹೋದರೆ ನಿಸ್ಸಂಕೋಚದಿಂದ ೫ ರೂಪಾಯಿಯ ನೋಟನ್ನು ಒಗೆಯುತ್ತಿದ್ದ. ಇತರ 'ಸೋಜರ್'ಗಳ ಮುಂದೆ ತಾನೊಬ್ಬ ದೊಡ್ಡ ಸರದಾರ ಎಂದು ತೋರಿಸಿ ಕೊಳ್ಳುವ ಆಸೆ. ಉರ್ದು—ಇಂಗ್ಲಿಷ್ ಬಿಟ್ಟು ಬೇರೆ ಮಾತಾಡುವುದು ಅವನಿಗೆ ಹೀನಾಯವಾಗಿತ್ತು. ತನ್ನ ಹಿಂದಿನ ಬಾಳುವೆಯ ಸ್ಮೃತಿ ಸಹ ಗಂಗನಲ್ಲಿ ಉಳಿಯಲಿಲ್ಲ. ಅದರ ನೆನಪು ಬಂದಾಗ 'ಕೆಟ್ಟ ಕನಸು' ಎಂದು ಭಾವಿಸುತ್ತಿದ್ದ. ಈಗಿನ ಬಾಳುವೆ ಚಿರಕಾಲ—ಶಾಶ್ವತವಾಗಿ ನಡೆಯುವುದೆಂದು ಅವನ ದೃಢ ವಿಶ್ವಾಸ.

ಅವನ ಕನಸಿನ ಕನ್ನಡಿ ಒಂದು ದಿನ ಒಡೆದು ಹೋಯಿತು. ಯುದ್ಧ ನಿಂತು ಹೋದ ಸುದ್ದಿ ಬಂತು. ಗಂಗನಿಗೂ, ಅವನ ಜತೆ ಸೈನ್ಯ ಸೇರಿದ್ದವರಿಗೂ 'ಡಿಸ್‌ಚಾರ್ಜ್' ನೋಟೀಸ್ ಬಂತು. ಗಂಗನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು.

ಸಪ್ಪೆಮೋರೆ ಹಾಕಿಕೊಂಡು ಊರಿನ ಕಡೆ ಹೊರಟ. ಮನೆಯ ಬಾಗಿಲಿಗೆ ಬರುತ್ತಾನೆ—ಎಲ್ಲಾ ಹಾಳು ಹಾಳು ಸುರಿಯುತ್ತಿದೆ. ಅವನನ್ನು ಬೆಳಸಿ, ಕಾಪಿಟ್ಟ ಪ್ರಕೃತಿ ಕನಲಿ ನಿಂತಂತಿದೆ. ತಿಮ್ಮಿ ದನ ಅಟ್ಟಿಕೊಂಡು ಹೋಗಿದ್ದಳು. ಒಳಗೆ ಮೃತ್ಯುಶಯ್ಯೆಯಲ್ಲಿ ಮಲಗಿದ್ದ ತಾಯಿಯ ದಾರುಣ ಅವಸ್ಥೆಯನ್ನು ಕಂಡ. ಕರುಳು ಕುತ್ತಿಗೆಗೆ ಬಂತು.

"ಅವ್ವಾ. ಅವ್ವಾ . . ." ಎಂದ

ಮುದುಕಿ ಮೆಲ್ಲನೆ ಕಣ್ಣುಬಿಡಿಸಿಕೊಂಡು ನೋಡಿತು. ಸ್ವರ ತೀರ ಕ್ಷೀಣವಾಗಿತ್ತು.

"ಯಾರಪ್ಪಾ ಅದು."

ಗಂಗ ಹತ್ತಿರ ಹೋಗಿ ಕುಳಿತು "ನಾನವ್ವಾ—ಗಂಗಾ." ಎಂದ.

ಮುದುಕಿ ಕೋಪದಿಂದ ಮುಖವನ್ನತ್ತ ತಿರುಗಿಸಿದಳು. ಅವಳ ಶುಷ್ಕ ಕಣ್ಣುಗಳಿಂದ ನಾಲ್ಕು ಹನಿ ಜಾರಿತು.

"ಬಂದ್ಬುಟ್ಟೆ ಕಣವ್ವ—ಇನ್ನೂ ಎಲ್ಲೀಗೂ ಓಗಾಕಿಲ್ಲ."

ಮುದುಕಿ ಮಗನನ್ನೊಮ್ಮೆ ನೋಡಿ, ಕಡುಶೋಕದಿಂದ

"ಆಡೆದವ್ವಂಗೆ ಎಲ್ಡು ಬಗೆದ್ಯೆಲ್ಲೋ?" ಎಂದಳು.

"ಯಾರಿಗವ್ವಾ . . ."

"ಬೂಮಿತಾಯೀಗೆ. ಒಲ ಓಯ್ತು—ದನ ಓಯ್ತು—ನಿನ್ನ ಉಂಜ ಗೊಟಕ್ಕಂತು—ಇನ್ನೇನೈತೆ—ನಿಮ್ಮವ್ವನ ಮಣ್ಣು ಮಾಡ್ಬುಡು—ಎಲ್ಲಾ ಮುಗಿತ್ಯೈತೆ."

ತಿಮ್ಮಿ ಅದೇ ಬಂದಿದ್ದವಳು ಮಾತು ಕೇಳಿಸಿಕೊಂಡಳು.

"ಓಗ್ಲಿ ಬುಡು ಮುದುಕಿ. ದಣ್ದು ಬಂದವ್ರೆ. ಯಾಸಾಟೀಗೆ ಗದರಕೊಂತಿ."

"ಈ ಮೂಳ ನಿನ್ನ ಗಂಡಾ ಆಗೋಕ್ಮುಂಚೆ ನನ್ನ ಮಗ ಆಗಿದ್ದ ಕಣೇ ಮೂಳೀ"

ಎಂದು ಮುದುಕಿ ಗದರಿಸಿ "ಇಲ್ಲಿ ಬಾರ್ಲ—ಸಿಪಾಯಪ್ಪ"

ಎಂದು ಮಗನನ್ನು ಹತ್ತಿರ ಕರೆದು ತಲೆ ನೇವರಿಸಿದಳು. ಗಂಗಣ್ಣನಿಗೆ ದುಃಖ ತಡೆಯಃದಾಗಲಿಲ್ಲ.

ಮಾರನೆಯ ದಿವಸದಿಂದ ಗಂಗಣ್ಣನಿಗೆ ಹೊತ್ತು ಕಳೆಯುವು ದಾಗಲಿಲ್ಲ. ರಾಗಿ ತೆನೆಗೊಂಡು ಬಳಕುತ್ತ ನಿಂತಿತ್ತು. ತನ್ನ ಹೊಲ—ತಾನು ದುಡಿದು ರಕ್ತ ಬಸಿದ ಹೊಲ. ಇಂದೂ ಸಮೃದ್ಧಿಯಾಗಿ ಫಸಲನ್ನು ಹೊತ್ತು ನಿಂತಿದೆ. ಆದರೆ ಆ ಫಲ ತನ್ನದಲ್ಲ. ಇಂದು ಅದರ ಮೇಲೆ ತನಗೆ ಯಾವ ಅಧಿಕಾರವೂ ಇಲ್ಲ. ಗಂಗಣ್ಣನ ರಕ್ತ ಕುದಿಯಿತು. ಗಂಟಲಿಗೆ ಬಂದ ಬಿಸಿರಕ್ತ ನುಂಗಿಕೊಂಡು ಶಾಂತನಾದ.

ಗಂಗನ ಹೊಲದ ಬದಿಯಲ್ಲಿ ಹೋಗುತ್ತಿದ್ದ ರಸ್ತೆಯ ರಿಪೇರಿ ಕೆಲಸ ನಡೆಯುತ್ತಿತ್ತು. ಗಂಗನಿಗೆ ಕೆಲಸ ಸಿಕ್ಕಿತು. ದಿನಕ್ಕೆ ಹನ್ನೆರಡಾಣೆ ಕೂಲಿ ಗಿಟ್ಟುತ್ತಿತ್ತು. ಹೊಟ್ಟೆಪಾಡು ಹಾಗೂ ಹೀಗೂ ಸಾಗುತ್ತಿತ್ತು. ಮುದುಕಿ ಚೇತರಿಸಿಕೊಳ್ಳಲಾರಂಭಿಸಿದ್ದಳು. ಹಾಸಿಗೆಯ ಮೇಲೆ ಎದ್ದು ಕೂಡುತ್ತಿದ್ದಳು—ತೆವಳಿಕೊಂಡು ಅಂಗಳಕ್ಕೆ ಬಂದು ನಸು ಚುರುಕಾದ ಬಿಸಿಲು ಕಾಯುತಿದ್ದಳು.

ಗಂಗ ಒಂದು ದಿನ ನೆತ್ತಿಯ ಮೇಲೆ ಸ್ವಾಮಿ ಮೂಡುವ ತನಕ ರಸ್ತೆ ಕೆಲಸಮಾಡಿ ಮನೆಗೆ ಬರುತ್ತಿದ್ದ. ಬಿಸಿಲಿನ ತಾಪದಿಂದ ಮುಖ ಕಂಗೆಟ್ಟಿತ್ತು. ಹೊಲದ ಮಧ್ಯೆ ಹಾಯ್ದು ಬರುವಾಗ ಈರಪ್ಪ ರಾಗಿಮೆದೆ

ಒಟ್ಟುತ್ತಿದ್ದುದನ್ನು ಕಂಡ. ಈರಪ್ಪ ಗಂಗನನ್ನು ಕರೆದು ಮೆದೆ ತೋರಿಸಿ

"ಚಿನ್ನದಂತ ಬೂಮಿ ಗಂಗಪ್ಪ . . ಸೊಂಪು ಬೆಳೆಯಾಗೈತೆ."

ಅಂದ. ಗಂಗ ಅದನ್ನು ದಿಟ್ಟಿಸಿ ನೋಡಿದ. ಸಂತೃಪ್ತನಾಗಿ ನಿಂತಿದ್ದ ಈರಪ್ಪನನ್ನು ದಿಟ್ಟಿಸಿ ನೋಡಿದ. ಒಳಗೆ ಕುದಿಯುತ್ತಿದ್ದ ಲಾವಾರಸ ಕಟ್ಟೆಯೊಡದುಕ್ಕಿತು. ಕೈಯಲ್ಲಿದ್ದ ಪಿಕಾಸಿಯನ್ನು ಈರಪ್ಪನ ತಲೆಗೆ ಬೀಸಿದ. ಈರಪ್ಪ ನೆತ್ತರ ಹೊಳೆಯಲ್ಲಿ ಮುಳುಗಿದವನಂತೆ ಅಲ್ಲಿಯೇ ಒರಗಿದ.

ಸುದ್ದಿ ಅರೆಕ್ಷಣದಲ್ಲಿ ಸುತ್ತ ಮುತ್ತ ಹಬ್ಬಿತು. ಪಟೇಲರು, ಗೌಡರು, ಪೋಲೀಸಿನವರು ಬಂದರು. ಗಂಗನನ್ನು ಹಿಡಿದು ಕೈಗೆ ಬಳೆ ತೊಡಿಸಿದರು. ಮುದುಕಿ ಎದೆ ಎದೆ ಬಡಿದುಕೊಂಡಳು. ತಿಮ್ಮ ಬೀದಿಯ ಮಣ್ಣನ್ನು ತಲೆಗೆ ಹೊಯ್ದುಕೊಂಡಳು.

ಗಂಗ ನೀರವ.

ಬಲೆಗೆ ಬಿದ್ದ ಹುಲಿಯನ್ನು ಹಿಡಿದೊಯ್ಯುವಂತೆ ಅವನನ್ನು ಎಳೆದೊಯ್ದರು.

ಮುದುಕಿ ಸ್ತಂಭೀಭೂತಳಾಗಿ ನೋಡುತ್ತ ನಿಂತಿದ್ದವಳು. 'ಬೂಮಿ ತಾಯಿ ಶಾಪ—ಶಾಪ' ಎಂದು ವಿಕಟವಾಗಿ ಚೀರಿ ಬಿದ್ದುಬಿಟ್ಟಳು. ಅವಳ ದೇಹದ ಒಂದು ಹಿಡಿ ಮಣ್ಣು ತಾಯಿ ಮಣ್ಣಿನಲ್ಲಿ ಬೆರೆತು ಹೋಯಿತು.



# ಮಧುರಸ್ವಪ್ನ

ಕಾಲೇಜಿನಲ್ಲಿ ಯಾವ ನಾಟಕವಾಡಿದರೂ ಪ್ರಧಾನ ಸ್ತ್ರೀ ಪಾತ್ರ ಜಾನಕೀರಾಮುನ ಮೀಸಲಾಗಿತ್ತು. ನಾಟ್ಯ ವಿಲಾಸಿ ಸಂಸ್ಥೆಗಳಲ್ಲಿ ಸ್ತ್ರೀ ಪಾತ್ರ ವಹಿಸುವುದಕ್ಕೆ ಹುಡುಗರನ್ನು ಒಪ್ಪಿಸುವುದು ತುಂಬ ಕಷ್ಟ. ಅದರಲ್ಲಿಯೂ ಕಾಲೇಜ್ ಸಂಸ್ಥೆಗಳಲ್ಲಿ ಅದರ ಕಷ್ಟ ಹೇಳತೀರದು. ಪಾತ್ರದ ಹೆಸರೇ ಶಾಶ್ವತವಾಗಿ ತಮಗುಳಿದು ಹೋಗುತ್ತದೆಂದು ಹುಡುಗರು ಹೆದರುತ್ತಿದ್ದರು.

ಇಂಥ ಹೆದರಿಕೆ, ಬೆದರಿಕೆಗಳಿಗೆ ಸೊಪ್ಪು ಹಾಕದಿದ್ದವನು ಜಾನಕೀರಾಮುನೊಬ್ಬನೇ. ಮಾಟವಾದ ದೇಹ, ನಸು ನೀಳವಾದ ಮುಖ, ನಿಂಬೆಯ ಹಳದಿ ಮಿಶ್ರ ಬಿಳಿ ಬಣ್ಣ. ಅವನ ಮುಖಕ್ಕೆ ನಾಟಕದ ಬಣ್ಣ ಬಹಳ ಚೆನ್ನಾಗಿ ಹಿಡಿಯುತ್ತಿತ್ತು. ಹಾವ ಭಾವ ವಿಲಾಸದಲ್ಲಿ ಗಂಡಸುತನದ ಒರಟೂ ಇರಲಿಲ್ಲ. ಜಾನಕೀರಾಮುನ ಪಾತ್ರಾಭಿನಯ ಕಂಡು, ಇಷ್ಟು ಒಳ್ಳೆಯ ನಟಿಯನ್ನು ದೊರಕಿಸಿರುವುದಕ್ಕೆ ಕಾಲೇಜ್ ನಾಟಕ ಸಂಸ್ಥೆಯ ಅಧಿಕಾರಿಗಳನ್ನು ಅತಿಥಿಗಳು ವಂದಿಸಿಯೂ ಇದ್ದರು.

ಜಾನಕೀರಾಮನೇ ಸ್ತ್ರೀ ಪಾತ್ರ ವಹಿಸಬೇಕೆಂದು ಕಾಲೇಜಿನವರು ಹೇಗೆ ಬಯಸುತ್ತಿದ್ದರೋ ಹಾಗೇ ಅವನೂ ಬಯಸುತ್ತಿದ್ದ. ನಾಟಕದ ದಿನ ಬಣ್ಣದ ಕೋಣೆಗೆ ಎಲ್ಲರೂ ಮುಂದಾಗಿ ಬರುತ್ತಿದ್ದವನು ಜಾನಕೀ ರಾಮು. ತಿದ್ದಿ ತಿದ್ದಿ ಬಣ್ಣ ಹಚ್ಚಿಕೊಂಡು, ಮೊಲೆಗಟ್ಟು, ಟೋಪನ್ ಧರಿಸಿ, ಸೀರೆ ಕುಪ್ಪಸ ತೊಟ್ಟು, ಮುಂದಲೆ ತೀಡಿಕೊಳ್ಳುತ್ತಾ ಕನ್ನಡಿ ಮುಂದೆ ನಿಂತುಕೊಂಡು, ಅತ್ತಿತ್ತ ತಿರುಗಿ ನೋಡಿ, ನಾಲ್ಕಾರು ಬಗೆ ಸೊಟ್ಟಮೂತಿ ಮಾಡಿ ತನ್ನ ರೂಪ ವೈಭವವನ್ನು ಆರಾಧಿಸುವುದೆಂದರೆ ಜಾನಕಿರಾಮುನಿಗೆ ಪಂಚಪ್ರಾಣ.

ಜಾನಕೀರಾಮುನ ಸ್ನೇಹವನ್ನು ಎಲ್ಲ ವಿದ್ಯಾರ್ಥಿಗಳೂ ಬಯಸು ತ್ತಿದ್ದರು. ಆದರೆ ಅದು ದೊರೆತಿದ್ದುದು ಗುರುಮೂರ್ತಿಗೆ ಮಾತ್ರ. ಗುರುಮೂರ್ತಿ ಕಾಲೇಜಿನ ವಿದ್ಯಾರ್ಥಿಯಾಗಿರಲಿಲ್ಲ. ಕಾಲೇಜ್ ಶಿಕ್ಷಣ ಮುಗಿಸಿಕೊಂಡು ಅದೇ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದ. ಹೆಂಡತಿ ಹೆರಿಗೆಗೆ ತೌರುಮನೆಗೆ ಹೋಗಿದ್ದುದರಿಂದ ತಾನೂ ಕಾಲೇಜ್ ಹಾಸ್ಟಲಿ ನಲ್ಲಿಯೇ ಇರುತ್ತಿದ್ದ.

ಹಾಸ್ಟಲಿನಲ್ಲಿ ೩೮ ನಂಬರಿನ ಕೋಣೆಯಲ್ಲಿ ಜಾನಕೀರಾಮು, ವೆಂಕಟರಾಯ ಇರುತ್ತಿದ್ದರು. ೩೯ ನಂಬರಿನ ಕೋಣೆಯಲ್ಲಿ ಗುರು ಮೂರ್ತಿ, ಆದಿ ನಾರಾಯಣ ಇರುತ್ತಿದ್ದರು.

ಗುರುಮೂರ್ತಿ ಕಾಲೇಜಿನಲ್ಲಿ ಎಲ್ಲರ ಅಚ್ಚುಮೆಚ್ಚಾಗಿದ್ದ. ಕ್ರೀಡಾ ರಂಗದಲ್ಲಿ ಅವನು ಸರ್ವಾಧಿಕಾರಿ. ಯಾವ ಸ್ಪರ್ಧೆಯಲ್ಲಿ ಅವನು ಭಾಗವಹಿಸಿದರೂ ಕಾಲೇಜಿಗೆ ಪಾರಿತೋಷಿಕ ಕಟ್ಟಿಟ್ಟ ಮುಡಿಪು. ಡಿಗ್ರಿ ತೆಗೆದುಕೊಂಡ ಕೂಡಲೆ ಅವನಿಗೆ ಕೆಲಸ ಸಿಕ್ಕಿದುದೂ ಇದೇ ಕಾರಣಕ್ಕೆ. ಇಂತಹ ಉತ್ತಮ ಆಟಗಾರ ಕಾಲೇಜಿನಲ್ಲಿಯೇ ಇರಬೇಕೆಂದು ಪ್ರಿನ್ಸಿಪಾಲರು ಅವನನ್ನು ಲೆಕ್ಚರರ್ ಮಾಡಿದರು.

ತಾನು ಶಿಕ್ಷಕನಾಗಿದ್ದೇನೆಂಬ ಅಹಂಕಾರವನ್ನು ಮೆರೆಸದೆ ಹುಡುಗರಲ್ಲಿ ಹುಡುಗನಾಗಿ, ದೊಡ್ಡವರಲ್ಲಿ ದೊಡ್ಡವನಾಗಿ ಗುರುಮೂರ್ತಿ ಎಲ್ಲರ ವಿಶ್ವಾಸವನ್ನೂ ದೊರಕಿಸಿಕೊಂಡಿದ್ದ. ಹಾಸ್ಟೆಲ್ ಹುಡುಗರಿಗಂತೂ ಅವನನ್ನು ಕಂಡರೆ ತುಂಬ ವಿಶ್ವಾಸ. ಪರೀಕ್ಷೆಗೆ ಹೋಗುವ ವಿದ್ಯಾರ್ಥಿ

ಯಾವ ಹೊತ್ತಿನಲ್ಲಿ ಬಂದು ಪಾಠ ಪ್ರವಚನಗಳ ಸಹಾಯ ಕೇಳಿದರೂ ಗುರುಮೂರ್ತಿ ಸಂತೋಷದಿಂದ ನೆರವು ನೀಡುತ್ತಿದ್ದ.

ವಿದ್ಯಾರ್ಥಿಗಳ ಜತೆ ಬಾಳುವೆಮಾಡುವುದು ಒಂದು ರೀತಿಯಲ್ಲಿ ತುಂಬ ಕಷ್ಟ; ಇನ್ನೊಂದು ರೀತಿಯಲ್ಲಿ ತುಂಬ ಸುಲಭ. ಶಿಕ್ಷಕ ಅತ್ಯಂತ ಮೇಧಾವಿಯಾಗಿ, ಅಹಂಕಾರದಲ್ಲಿ ಮೆರೆದರೆ ವಿದ್ಯಾರ್ಥಿಗಳು ಒಲ್ಲೆ ಯೆನ್ನುತ್ತಿರಲಿಲ್ಲ. ಅವನ ಬುದ್ಧಿಶಕ್ತಿಗೆ ಮನಸೋಲುತ್ತಿದ್ದರು. ಮೇಧಾವಿ ಯಲ್ಲದಿದ್ದರೂ ಶಿಕ್ಷಕ ಪ್ರಿಯವ್ಯಕ್ತಿಯಾಗಿದ್ದರೆ ವಿದ್ಯಾರ್ಥಿಗಳು ಅವನನ್ನು ಆರಾಧಿಸುತ್ತಾರೆ. ಗುರುಮೂರ್ತಿ ಎರಡನೆಯ ವರ್ಗಕ್ಕೆ ಸೇರಿದ್ದ. ಅವನಿಗೆ ಫಿಸಿಕ್ಸ್‌ಗಿಂತ ಕ್ರಿಕೆಟ್ ಚೆನ್ನಾಗಿ ಗೊತ್ತಿತ್ತು. ಕಾಲೇಜಿನಲ್ಲಿ ಕ್ರಿಕೆಟ್ಟಿಗೆ ಒಂದು 'ಫ್ಯಾಕಲ್ಟಿ' ತೆಗೆದರೆ ಅದರ 'ಡೀನ್' ಪದವಿ ನಿರಾಯಾಸವಾಗಿ ಗುರುಮೂರ್ತಿ ಪಾಲಾಗುತ್ತಿತ್ತು.

ರಾಮು ಮಿಕ್ಕೆಲ್ಲ ವಿಷಯಗಳಲ್ಲಿ ತೇರ್ಗಡೆಯಾಗುವ ಸಂಭವವಿದ್ದರೂ 'ಫಿಸಿಕ್ಸ್' ನಲ್ಲೇ ಸ್ವಲ್ಪ ಐಬು. ಏಕೋ ಏನೋ ತಲೆಚಚ್ಚಿಕೊಂಡರೂ ಅವನಿಗೆ ಫಿಸಿಕ್ಸ್ ಹತ್ತುತ್ತಿರಲಿಲ್ಲ. ಪರೀಕ್ಷೆ ಸಮಾಪಿಸುತ್ತಿದ್ದುದನ್ನು ಕಂಡು ರಾಮು ರೂಂಮೇಟ್ ವೆಂಕಟರಾಯ, ಪಕ್ಕದ ರೂಮಿನ ಆದಿನಾರಾಯಣ ತನ್ನ ಜತೆಯಲ್ಲಿದ್ದರೆ ಓದಿಗನುಕೂಲವಾಗುತ್ತದೆಂದು ಸೂಚಿಸಿದ. ಗುರುಮೂರ್ತಿ ಮುಂದೆ ವಿಷಯ ನಿರ್ಧಾರಕ್ಕೆ ಬಿತ್ತು. ವೆಂಕಟರಾಯ ಆದಿನಾರಾಯಣ ೩೮ ರಲ್ಲಿರುವುದೆಂದೂ, ಜಾನಕೀರಾಮು, ಗುರುಮೂರ್ತಿ ೩೯ ರಲ್ಲಿರುವುದೆಂದೂ ನಿರ್ಣಯವಾಯಿತು.

ಗುರುಮೂರ್ತಿ ತನ್ನ ವಿದ್ಯಾರ್ಥಿಯಲ್ಲಿ ಹೆಚ್ಚಿನ ಆಸಕ್ತಿ ವಹಿಸ ಲಾರಂಭಿಸಿದ. ಫಿಸಿಕ್ಸಿನಲ್ಲಿ ಜಾನಕೀರಾಮುನನ್ನು 'ಫಸ್ಟ್' ಹೊಡೆಸುತ್ತೇನೆ ಎಂದು ಗುರುಮೂರ್ತಿ ಶಪಥತೊಟ್ಟ. ರಾತ್ರಿ ೧೨ ಗಂಟೆಯಾದರೂ ಹಾಸ್ಟೆಲಿನ ವಿದ್ಯಾರ್ಥಿಗಳ ಕೋಣೆಯಲ್ಲಿ ದೀಪ ಉರಿಯುತ್ತಲೇ ಇರುತ್ತಿತ್ತು.

ಜಾನಕೀರಾಮುನ ನಯ, ಮಾಧುರ್ಯ, ಸಹಜ ಸವಿಮಾತು ಗುರುಮೂರ್ತಿಯ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿ ದವು. ದಿನದಿನಕ್ಕೆ ಅವನ ಬಗ್ಗೆ ಗುರುಮೂರ್ತಿಯ ವಾತ್ಸಲ್ಯ ಬೆಳೆಯುತ್ತಿತ್ತು.

ತಾನು ಕ್ರಿಕೆಟ್‌ಗೆ ಹೋದರೆ, ಆಟ ನೋಡುತ್ತ ಜಾನಕೀರಾಮು ಕುಳಿತಿರಬೇಕು, ಸಿನೀಮಾಕ್ಕೆ ಹೋದರೆ ಜಾನಕೀರಾಮು ಜತೆಯಲ್ಲಿರಬೇಕು. ಒಂದು ಒಳ್ಳೆಯ ಕೋಟು ಹೊಲಿಸಿಕೊಂಡರೆ, ಅಂತಹದೇ ಕೋಟು ಜಾನಕೀರಾಮು ಹಾಕಬೇಕು. ಅವರಿಬ್ಬರನ್ನು ಕಂಡರೆ ಗುರು, ಶಿಷ್ಯ ಎನ್ನುವುದಕ್ಕಿಂತ ಅವಳಿಜವಳಿ ಮಕ್ಕಳು ಎನ್ನುವ ಹಾಗಿತ್ತು.

ಪರೀಕ್ಷೆಗೆ ಓದಿ ಓದಿ ಜಾನಕೀರಾಮುನಿಗೆ ಜ್ವರ ಬರಲಾರಂಭಿಸಿತು. ಗುರುಮೂರ್ತಿಯ ದುಃಖ ಹೇಳಲಾಸಲ್ಲ. ಡಾಕ್ಟರನ್ನು ಕರೆದುಕೊಂಡು ಬರುವವನೂ ಅವನೇ—ಔಷಧ ಕುಡಿಸುವವನೂ ಅವನೇ—ಹಣ್ಣು ಸುಲಿದು ತಿನ್ನಿಸುವವನೂ ಅವನೇ. ಅವನ ಕಳಕಳಿಯನ್ನು ಕಂಡು ಹಾಸ್ಟೆಲ್ ವಿದ್ಯಾರ್ಥಿಗಳು ಮೊದಲಿಗಿಂತ ಹೆಚ್ಚಾಗಿ ಗುರುಮೂರ್ತಿಯನ್ನು ಪ್ರೀತಿಸಲಾರಂಭಿಸಿದರು.

"ಎಲ್ಲರೂ ಸಂಬಳಕ್ಕೆ ೩೦ನೆಯ ತಾರೀಖು ಎಣಿಸೋ ಮೇಷ್ಟ್ರು. ಗುರುಮೂರ್ತಿಯಂಥ ಮೇಷ್ಟ್ರು ಎಲ್ಲಿ ಸಿಕ್ಕುತ್ತಾರಯ್ಯ. ವಿದ್ಯಾರ್ಥಿಗಳನ್ನು ತಮ್ಮಂದಿರಂತೆ ನಡೆಸಿಕೊಂಡು ಅವರ ಕಷ್ಟಸುಖ ನೋಡಿಕೊಳ್ಳುವ ಮೇಷ್ಟ್ರು."

ಎಂದು ವಿದ್ಯಾರ್ಥಿಗಳು ಗುರುಮೂರ್ತಿಯನ್ನು ಕೊಂಡಾಡುತ್ತಿದ್ದರು.

ಪರೀಕ್ಷೆ ಸಮಯದಲ್ಲಿ ಗುರುಮೂರ್ತಿ ಶಿಷ್ಯರಿಗೆ ನೀಡಿದ ನೆರವು ಅವನನ್ನು ಅವರ ಹೃದಯಮಂದಿರದಲ್ಲಿ ಶಾಶ್ವತವಾಗಿ ಮೂಡಿಸಿತು. ಜಾನಕೀರಾಮುನಂತೂ ಎಷ್ಟು ಜನ್ಮಕ್ಕೂ ತೀರದ ಋಣ ಇದೆಂದು ಭಾವಿಸಿದ.

ಜಾನಕೀರಾಮು ಗುರುಮೂರ್ತಿಗೆ ತನ್ನ ಬಗ್ಗೆ ತಿಳಿಸದೇ ಇದ್ದ ವಿಷಯವೇ ಇರಲಿಲ್ಲ. ಮನೆಯವರೆಲ್ಲರ ವಿಷಯ, ಆದಾಯ, ಖರ್ಚು ಸಂಸಾರದ ಸಣ್ಣಪುಟ್ಟ ಕದನ ಕಾಳಗಗಳೆಲ್ಲವನ್ನೂ ವರದಿ ಒಪ್ಪಿಸಿದ್ದ ಆದರೆ ತನ್ನ ಮದುವೆಯ ವಿಷಯ—ಹೆಂಡತಿಯ ವಿಷಯ ಹೇಳುವುದಕ್ಕೆ ನಾಚುತ್ತಿದ್ದ. 'ಹುಡುಗ—ನಾಚಬೇಕಾದುದು ಸ್ವಾಭಾವಿಕ' ಎಂದುಕೊಂಡು ಗುರುಮೂರ್ತಿ ಆ ವಿಷಯವನ್ನು ಕೆದಕಿ ಕೇಳಲು ಪ್ರಯತ್ನಿಸುತ್ತಿರಲಿಲ್ಲ.

ಪರೀಕ್ಷೆ ಮುಗಿಯುತ್ತ ಬಂದಿತ್ತು. ಪ್ರ್ಯಾಕ್ಟಿಕಲ್ ಮಾತ್ರ ಉಳಿದಿತ್ತು. ಜಾನಕೀರಾಮನಿಗೆ ಅವನ ತಂದೆಯಿಂದ, ಪತ್ರ ಬಂದಿತ್ತು. ಪತ್ರವನ್ನು ನೋಡಿದಾರಭ್ಯ ಅವನ ಮುಖ ಸ್ವಲ್ಪ ನಿಸ್ತೇಜವಾಗಿತ್ತು. ಮನಸ್ಸಿನಲ್ಲಿ ಕಳವಳ. ನಗೆವನದ ಮೇಲೆ ಚಿಂತೆಯ ಮೋಡ ಮುಸುಕಿತ್ತು. ಗೆಳೆಯರಲ್ಲಿಯೂ ಬಾಯಿಬಿಡ—ಗುರುಮೂರ್ತಿಯಲ್ಲಿಯೂ ತನ್ನ ಹೃದಯವನ್ನು ಬಿಚ್ಚಿಡ.

ಒಂದು ದಿನ ಸಂಜೆ ಗುರುಮೂರ್ತಿ, ಜಾನಕೀರಾಮ್ ಪ್ಯಾಲೆಸ್ ತೋಟಗಳ ರಸ್ತೆಯಲ್ಲಿ ಗಾಳಿ ಸಂಚಾರ ಹೊರಟರು. ನಡೆದದ್ದು ಸಾಕಾಗಿ ತೋಟದ ಮುಂದೆ ಹಾಕಿದ್ದ, ಕಲ್ಲು ಬೆಂಚುಗಳ ಮೇಲೆ ಕುಳಿತರು.

"ಏಕೆ ಜಾನಕೀ—ಬಹಳ ಯೋಚನೆ ಮಾಡುತ್ತಿದ್ದೀ?"

"ಏನೂ ಇಲ್ಲ. ಪರೀಕ್ಷೆಯಲ್ಲಿ ಪಾಸಾಗುತ್ತೋ ಇಲ್ಲವೋ ಎಂದು ಚಿಂತೆ."

"ನಾನು ನಂಬಲಾರೆ. ಈಗ ಮೂರು ನಾಲ್ಕು ದಿವಸದಿಂದ ನಿನ್ನ ರೀತಿಯೇ ಬದಲಾಯಿಸಿದೆ."

"ಹೌದು! ಪರೀಕ್ಷೆ ಮುಗಿಯುತ್ತ ಬಂತು. ಇನ್ನು 'ಮುಂದೇನು' ಎಂದು ಯೋಚನೆ ಹತ್ತಿದೆ."

"ಮುಂದೇನು? ಎಂ.ಎಸ್ ಸಿಗೆ ಓದುವುದೆಂದು ಮೊದಲೇ ತೀರ್ಮಾನವಾಗಿದೆಯಲ್ಲಾ."

"ಆಗಿದೆ?"

"ಹಾಗಾದರೆ, ನಿಮ್ಮ ತಂದೆ ಬೇಡವೆಂದು ಬರೆದಿದ್ದಾರೆಯೇ?"

"ಪಾಪ—ಅವರೆಂದಿಗೂ ನನ್ನ ಪ್ರಗತಿಗೆ ಅಡ್ಡ ಬರುವುದಿಲ್ಲ."

"ನಿನ್ನ ಮಾತೊಂದೂ ನನಗೆ ಅರ್ಥವಾಗುವುದಿಲ್ಲ. ಹೇಳಲು ಇಷ್ಟವಿಲ್ಲದಿದ್ದರೆ ಬಿಡು."

ಗುರುಮೂರ್ತಿಯ ಧ್ವನಿಯ ಲಕ್ಷಣದಿಂದ ಅವನಿಗೆ ಕೋಪಬಂದಿದೆಯೆಂದು ತಿಳಿಯಲು ಜಾನಕಿರಾಮ್ ಬಹಳ ಬುದ್ಧಿವಂತಿಕೆ ವ್ಯಯಮಾಡಬೇಕಾಗಿರಲಿಲ್ಲ.

"ಕೋಪ ಮಾಡಿಕೊಳ್ಳಬೇಡಿ ಸಾರ್."

"ನನ್ನಲ್ಲಿ ನಿನಗೆ ನಂಬಿಕೆ ಇಲ್ಲವೆಂದ ಹಾಗಾಯಿತು."

"ನಂಬಿಕೆ ಮಾತಲ್ಲ ಸಾರ್–ರೂಮಿಗೆ ಹೋಗುತ್ತಲು ತಿಳಿಸುತ್ತೇನೆ."

ಗುರುಮೂರ್ತಿ ಆಗಲೆಂದ. ಇಬ್ಬರೂ ಎದ್ದು ಅಲ್ಲಿಂದ ಹಾಸ್ಟೆಲ್ ಕಡೆ ನಡೆದರು.

ಇಬ್ಬರೂ ಊಟ ಮುಗಿಸಿ ರೂಮಿಗೆ ಬಂದರು. ಜಾನಕೀರಾಮ್ ತಂದೆಯಿಂದ ಬಂದಿದ್ದ ಕಾಗದವನ್ನು ಗುರುಮೂರ್ತಿಯ ಕೈಯಲ್ಲಿಟ್ಟ. ಓದಿ ನೋಡಿ.

"ಆಗಲಿ ಎಂದು ಬರೆ. ಇದರಲ್ಲಿ ದುಃಖಪಡುವ ವಿಷಯ ಏನಿದೆ. ಸಂತೋಷ."

ಅದಕ್ಕೆ ಪ್ರತ್ಯುತ್ತರ ಜಾನಕೀರಾಮನ ಕಣ್ಣುಗಳಲ್ಲಿತ್ತು – ಆದರೆ ಗುರುಮೂರ್ತಿಗೆ ಅದು ಅರ್ಥವಾಗಲಿಲ್ಲ.

ಜಾನಕೀರಾಮ್ 'ಪ್ರ್ಯಾಕ್ಟಿಕಲ್' ಮುಗಿಸಿಕೊಂಡು ಊರಿಗೆ ಹೊರಟ.

"ಕಾಗದ ಬರೆಯುತ್ತೇನೆ. ಬರಬೇಕು ಸಾರ್. ಮಂಡ್ಯ – ಬಹಳ ದೂರವೇನಿಲ್ಲ."

"ಖಂಡಿತವಾಗಿ ಬರುತ್ತೇನೆ"

ಎಂದು ಗುರುಮೂರ್ತಿ ಆಶ್ವಾಸನವನ್ನಿತ್ತ.

ಜಾನಕೀರಾಮ್ ಚನ್ನಪಟ್ಟಣ ಸೇರಿದ ೮-೧೦ ದಿವಸಕ್ಕೆ ಸಂಸಾರ ಸಮೇತನಾಗಿ ಮಂಡ್ಯಕ್ಕೆ ಪ್ರಯಾಣ ಬೆಳೆಸಬೇಕಾಯಿತು. ಚನ್ನಪಟ್ಟಣ ದಿಂದಲೇ ಗುರುಮೂರ್ತಿಗೆ ಒಂದು ಕಾಗದ ಬರೆದುಹಾಕಿದ. ಬರುವಾಗ ಜತೆಯಲ್ಲಿ ಆದಿನಾರಾಯಣ, ವೆಂಕಟರಾಯನನ್ನೂ ಖಂಡಿತ ಕರೆದು ಕೊಂಡು ಬರಬೇಕೆಂದು ಒಂದು 'ವಿ. ಸೂ.' ಸೇರಿಸಿದ.

ಮಂಡ್ಯ ಸೇರಿದ ಮಾರನೆಯ ದಿನದಿಂದಲೇ ಶಾಸ್ತ್ರ ವಿಧಿಗಳಾರಂಭ ವಾದವು. ಎದ್ದಕೂಡಲೆ ಜಾನಕಿರಾಮನಿಗೆ ತೈಲಾಭ್ಯಂಜನವಾಗಿ, ನೂತನ ವಸ್ತ್ರಗಳು ದೊರೆತವು. ಮಧ್ಯಾಹ್ನದವರೆವಿಗೂ ಹೋಮ, ಹವನಾದಿಗಳು ಸಾಂಗವಾಗಿ ನಡೆದವು. ಪುಷ್ಕಳ ಭೋಜನವೂ ಆಯಿತು.

ರಾತ್ರಿ ಕಲಾಪವೆಲ್ಲಾ ಹೆಂಗಸರ ಸರ್ವಾಧಿಕಾರಕ್ಕೆ ಒಳಪಟ್ಟಿತ್ತು.

ಜಾನಕಿರಾಮನ ಅತ್ತಿಗೆ ನಾದಿನಿಯರು, ಅವರ ಅತ್ತಿಗೆ ನಾದಿನಿಯರು ಒಂದು ತಿಂಗಳಿಂದ ಅಂದೋಜಿ ಸಾಮಾನುಗಳನ್ನು ಅಣಿಮಾಡಿದ್ದರು. ಸಕ್ಕರೆ ಕಾಳಿನ ಮಾಲೆ, ಮೋಂಬತ್ತಿ ಕಾಳಿನ ಮಾಲೆ, ಕಾಗದದ ಹೂಗಳ ಮಾಲೆ ಮೊದಲಾದ ಬಗೆಬಗೆಯ ಮಾಲೆಗಳನ್ನು ಸಿದ್ಧಗೊಳಿಸಿದ್ದರು. ಜಾನಕೀರಾಮನ ಭಾವಮೈದುನ ಶೇಷೂ, ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಕೆಲವು ದಿವಸ ಇದ್ದು ಬಂದಿದ್ದ. ಈಗವನು ಚನ್ನಪಟ್ಟಣದ ಬಣ್ಣದ ಸಾಮಾನುಗಳಿಗೆ ಹೂಗಿಡಗಳನ್ನು ಬರೆದುಕೊಡುತ್ತಿದ್ದರೂ ಪೂರ್ವಜನ್ಮದ ವಾಸನೆ ಅಳಿಯದಂತೆ ರಕ್ಷಿಸಿಕೊಳ್ಳಲು ಯತ್ನಿಸುತ್ತಿದ್ದ. ಶಯ್ಯಾಗೃಹದ ಅಲಂಕಾರ ಅವನ ಪಾಲಿಗೆ ಬಿದ್ದಿತ್ತು. ಅವನ ಗುರುವಾಗಿ ನಿಂತು ಎಲ್ಲ ಅಲಂಕಾರಗಳನ್ನೂ ತನ್ನ ಅಭಿರುಚಿಗೆ ತಕ್ಕಂತೆ ಮಾಡಿಸುತ್ತಿದ್ದವಳು ಅವನ ಹೆಂಡತಿ ಸೀತೂ.

ಗೋಡೆಯ ಮೇಲೆ ಶೇಷು ಬರೆದ ಕೆಲವು ಚಿತ್ರಗಳೇ ತೂಗುಹಾಕಲ್ಪಟ್ಟದ್ದವು. ಒಂದು ಉಷೆಯ ಮಧುರ ಸ್ವಪ್ನದ ಚಿತ್ರ–ಇನ್ನೊಂದು ಉಷಾ, ಅನಿರುದ್ಧರ ಪ್ರಣಯ ಪ್ರಸಂಗದ ಒಂದು ನೋಟ. ಮತ್ತೊಂದು ಹಲವು ಪ್ರದರ್ಶನಗಳಲ್ಲಿ ಬಹುಮಾನ ಪಡೆದಿದ್ದ 'ಪರಿತ್ಯಕ್ತ ಪ್ರಣಯಿನಿ'ಯ ಚಿತ್ರ. ಹೆಣ್ಣಿನ ಮುಖದ ಕಾರುಣ್ಯಕ್ಕಿಂತ, ಗಂಡಿನ ಮುಖದ ಕಾಠಿಣ್ಯ ಶೇಷು ಕುಂಚದಿಂದ ಚೆನ್ನಾಗಿ ಚಿಮ್ಮಿತ್ತು—ಗಂಡು ಗರ್ವಿಷ್ಠನಾಗಿ ಕೈಕಟ್ಟಿ ನಿಂತಿದ್ದಾನೆ. ಹೆಣ್ಣು ಅವನ ಬಳಿ ಸರಿದು, ಒಲವಿನಿಂದ, ಕಂಬನಿಯಿಂದ, ಯಾಚನೆಯಿಂದ ಅವನ ಕಟಾಕ್ಷವನ್ನು ನಿರೀಕ್ಷಿಸುತ್ತಿದ್ದಾಳೆ. ಪ್ರಣಯ ಕಲಹದ ಒಂದು ಮಧುರ ಭಾವವನ್ನು ಚಿತ್ರಗಾರ ತನ್ನ ಚೌಕಟ್ಟಿನಲ್ಲಿ ಸೆರೆಬಿಡಿಯಲೆತ್ನಿಸಿದ್ದ. ಆ ಚಿತ್ರ ಶಯ್ಯಾಗೃಹದಲ್ಲಿ ಬೇಡ ಎಂದು ಶೇಷು ವಾದ–ಬೇಕೇ ಬೇಕು ಎಂದು ಸೀತೂ ಹಟ.

"ಗಂಡಸರು ಎಂಥ ಕಠಿಣಚಿತ್ತರು ಎನ್ನುವುದು ಗೊತ್ತಾಗಲಿ. ಅದು ಇರಲೇಬೇಕು."

"ಗಂಡಸರು ಕಠಿಣಚಿತ್ತರು ನಿಜ–ಆದರೆ ಅದನ್ನು ಸಾರುವ ಚಿತ್ರ ಶಯ್ಯಾಗೃಹದಲ್ಲೇಕೆ–ಅದೂ ಇಂದು...."

"ಇರಲಿ. ಆ ವಿಷಯ ಕುಮ್ಮೀ ಮನಸ್ಸಿಗೆ ಚೆನ್ನಾಗಿ ಗೊತ್ತಾಗಲಿ."

" ಒಳ್ಳೇ ಉಪಕಾರ ಮಾಡುತ್ತೀ ಬಿಡು. ರಾಮೂಗೂ ಕುಮ್ಮೀಗೂ ಮಧ್ಯೆ ತಂದು ಹಾಕೋ ಪ್ರಯತ್ನ ನೀನು ಮಾಡುತ್ತಿರೋದು."

" ಅಂಥ ದಡ್ಡಿಯಲ್ಲ ನಮ್ಮ ಕುಮ್ಮಿ."

" ಅವಳು ಜಾಣೆ. ಆದರೆ ನೀನೋ? "

" ನಾನೇನು – ನಿಮ್ಮ ಛಾಯಾನುವರ್ತಿನಿ – ನೀವು ಹೇಗೋ ನಾನು ಹಾಗೆ."

" ಉಪಾಯದಲ್ಲೇ ನನ್ನ ದಡ್ಡ ಅಂತೀಯಲ್ಲೇ? "

" ಕುಂಬಳಕಾಯಿ ಕಳ್ಳಾ ಅಂದರೆ ನೀವೇಕೆ ಹೆಗಲು ಮುಟ್ಟಿ ನೋಡಿ ಕೊಳ್ಳುತ್ತೀರಿ."

" ಹೋಗಲಿ – ಹತ್ತಿರ ಬಾ "

" ಸುಮ್ಮನಿರೀಂದ್ರೆ ಸಾಕು. ನಿಮ್ಮ ಈ ಉತ್ಸವ ಆಗಿ ಬಹಳ ದಿವಸವಾಯ್ತು."

" ಅದಕ್ಕಲ್ಲವೇ ಹುಚ್ಚಿ....ನಾನು ಮೇಜಿನ ಮೇಲೆ ಹತ್ತುತ್ತೇನೆ. ಸ್ವಲ್ಪ ಪಠಹಿಡಿದುಕೋ ಬಾ – ಬಿದ್ದು ಗಾಜು ಒಡೆದು ಹೋದೀತು."

ಕೊನೆಗೂ ಸೀತೂ ಹಟವೇ ಗೆದ್ದಿತು. 'ಪರಿತ್ಯಕ್ತ ಪ್ರಣಯಿನಿ' ಭದ್ರಾಸನ ಹಾಕಿ ಗೋಡೆಯ ಮೇಲೆ ಕುಳಿತಳು.

ರಾತ್ರಿ ವಧೂವರರಿಗೆ ಬೇಗ ಊಟಮಾಡಿಸಿ ಶಯ್ಯಾಗೃಹಕ್ಕೆ ತಳ್ಳಿದರು. ಅಲ್ಲಿ ಹಾಸಿಗೆ ಮೇಲೆ ಕೂಡಿಸಿ ಆಗುವ ಆರತಿ ಅಕ್ಷತೆ ಕಲಾಪಗಳು ಮುಗಿದ ಮೇಲೆ ಕದವಿಕ್ಕಿದರು.

ಜಾನಕೀರಾಮನ ಮಾವ ಅವನ ಗುರುಗಳು ಬಂದಿದ್ದಕ್ಕೆ ತುಂಬ ಸಂತೋಷಿಸಿದರು. ಎಲ್ಲರಿಗಿಂತ ಒಂದು ಪಾಲು ಹೆಚ್ಚು ಉಪಚಾರ ಗುರುಮೂರ್ತಿಗಾಗುತ್ತಿತ್ತು.

ಬೆಳಗಾಯಿತು. ಬೀಗರಿಗೆ, ಅತಿಥಿಗಳಿಗೆ ಉಪಹಾರಾದಿಗಳನ್ನೊಪ್ಪಿಸಿ ಶೇಷು ಅವರನ್ನೆಲ್ಲಾ ಸಕ್ಕರೆ ಕಾರ್ಖಾನೆ ನೋಡಲು ಕರೆದೊಯ್ದ.

ಜಾನಕೀರಾಮನಿಗೆ ರಾತ್ರಿ ನಿದ್ದೆ ಬಂದಿರಲಿಲ್ಲ. ಕಣ್ಣುಗಳೆರಡೂ ಕಂಪಗೆ ಕಾದ ಕಬ್ಬಿಣದಂತಾಗಿದ್ದವು. ಎಲ್ಲರೂ ಹಿಂದಿರುಗುವುದನ್ನೇ ಕಾದಿದ್ದ – ಊಟ ಮುಗಿದೀತೇ ಎಂದು ತಹತಹಪಡುತ್ತಿದ್ದ. ಎರಡನೆಯ

ದಿವಸದ ಶಾಸ್ತ್ರವಿಧಿಗಳು, ಊಟ ಉಪಚಾರ ಮುಗಿದ ಮೇಲೆ ತನ್ನ ಕೋಣೆಯನ್ನು ಸೇರಿ ಸುಖವಾಗಿ ಮಲಗಿದ. ಕಣ್ಣು ತುಂಬ ನಿದ್ರೆ ಬಂತು.

ಊಟಮುಗಿದ ಮೇಲೆ ಇಸ್ಪೇಟ್ ಪ್ಯಾಕ್ ಬಿಚ್ಚಿಕೊಂಡು ಎಲ್ಲರೂ ಕುಳಿತರು. ಗುರುಮೂರ್ತಿಯೂ ಆಗ ಗುಂಪನ್ನು ಸೇರಬೇಕಾಗಿ ಬಂತು. ಸ್ವಲ್ಪ ಹೊತ್ತು ಆಡಿ ಪಕ್ಕದಲ್ಲಿದ್ದವನ ಕೈಗೆ ಎಲೆಗಳನ್ನಿತ್ತು ಮೆಲ್ಲನೆ ಜಾರಿದ.

ಬೆಳಿಗ್ಗೆಯಿಂದ ಜಾನಕೀರಾಮುನನ್ನು ಗುರುಮೂರ್ತಿ ಕಂಡು ಮಾತನಾಡಿರಲಿಲ್ಲ. ಊಟಕ್ಕೆ ಕುಳಿತಾಗಲೇ ಅವನನ್ನು ಕಂಡದ್ದು. ಆಗ ಎಲ್ಲರ ಸಮಕ್ಷಮ ಯಾವ ಮಾತೂ ಸಾಧ್ಯವಾಗಲಿಲ್ಲ.

ಜಾನಕೀರಾಮುನನ್ನು ಮಾತನಾಡಿಸಿ ಬರುವ ಎಂದು ಅವನ ಕೋಣೆಯತ್ತ ಸಾಗಿದ. ಸ್ವಲ್ಪ ಅಲುಗಾಡಿಸಿದ ಕೂಡಲೆ ಜಾನಕೀರಾಮುನಿಗೆ ಎಚ್ಚರವಾಯಿತು. ಗುರುಮೂರ್ತಿ ಅವನ ಮಂಚದ ಮೇಲೆ ಕುಳಿತ.

ಸ್ವಲ್ಪ ಹೊತ್ತು ಕಳೆದಿರಬಹುದು. ಕುಮ್ಮಿ ಬೆಳ್ಳಿಯ ಲೋಟದಲ್ಲಿ ಕಾಫಿ ತೆಗೆದುಕೊಂಡು ಗಂಡನಿಗೆ ಕೊಡಲು ಬಂದಳು. ಹಾಸಿಗೆಯ ಮೇಲೆ ಗಂಡನ ಜತೆ ಯಾರೋ ಇದ್ದುದನ್ನು ಕಂಡಳು. ಎದೆ ಧಸಕ್ಕೆಂದಿತು–ಕೈಜಾರಿ ಕಾಫಿ ಲೋಟ ಕೆಳಗೆ ಬಿತ್ತು. ಗುರುಮೂರ್ತಿ ಗಾಬರಿಯಾಗಿ ಕಣ್ಣು ಬಿಟ್ಟು ನೋಡಿದ. ಕುಸುಮಳ ಬೆನ್ನು ಕಣ್ಣಿಗೆ ಬಿತ್ತು.

ಕುಸುಮ ಒಳಗಿನ ಒಂದು ಕತ್ತಲೆಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡು ಅಳಲುಪಕ್ರಮಿಸಿದಳು. ಅವಳ ತಾಯಿಗೆ ಸುದ್ದಿ ಮುಟ್ಟಿ ಅವರು ಗಾಬರಿಯಾಗಿ ಓಡಿಬಂದು, ಬಾಗಿಲು ತೆಗೆಸಿ ಒಳಹೊಕ್ಕರು.

"ಅಳಬಾರದು ಕುಮ್ಮಿ–ಹಸೀಮೈ. ಏನಾದರೂ ಹೆಚ್ಚುಕಡಿಮೆಯಾದೀತು–ಏಕೆ–ಏನಾಯಿತೇ?"

ತಾಯಿ ಎಷ್ಟು ಬಲವಂತಮಾಡಿದರೂ ಕುಮ್ಮಿ ಬಾಯಿ ಬಿಡಲೊಲ್ಲಳು. ತಾಯಿ ಬೇಸತ್ತು ಗದರಿಸಿದರು. ಕುಮ್ಮಿ ತಾಯಿಯ ಕಿವಿಯಲ್ಲೇನೋ ಉಸುರಿದಳು. ಅದನ್ನು ಕೇಳಿ ಅವರು 'ರಾಮ ರಾಮ ಹೀಗೂ ಉಂಟೇ?'

ಎಂದದ್ದೇ ಅಲ್ಲಿಂದ ಸಟಕ್ಕನೆ ಎದ್ದು ಹೊರಟರು.

ಕುಮ್ಮಿ ತಾಯಿ – ತಂದೆ ಇಬ್ಬರೂ ಮಂತ್ರಾಲೋಚನೆ ನಡೆಸಿ, ವಿಷಯವನ್ನು ಸೂಕ್ಷ್ಮವಾಗಿ ಬೀಗರಲ್ಲಿ ಪ್ರಸ್ತಾಪಿಸಿದರು.

ಜಾನಕೀರಾಮನ ತಂದೆ ತಲೆತಲೆ ಚಚ್ಚಿಕೊಂಡರು. "ಕರೀರಪ್ಪಾ– ಆ ಕುಲಘಾತಕನ್ನಾ" ಎಂದರು.

ಎಲ್ಲರೂ ಜಾನಕೀರಾಮನಿಗಾಗಿ ಹುಡುಕಿದರು. ಅವನ ಪತ್ತೆ ಸಿಗಲಿಲ್ಲ. ಗುರುಮೂರ್ತಿ ಇಷ್ಟು ಗೊಂದಲವೇಳುವ ಮೊದಲೇ ಸೂಟ್ ಕೇಸ್ ತೆಗೆದುಕೊಂಡು ಸ್ಟೇಷನ್ ಕಡೆ ಹೊರಟುಬಿಟ್ಟಿದ್ದ.

ಜಾನಕೀರಾಮನಿಗಾಗಿ ಎಲ್ಲ ಕಡೆ ಹುಡುಕಿಸಿದರು – ಕೆರೆ – ಭಾವಿಗಳನ್ನು ಕೂಡ ಬಿಡಲಿಲ್ಲ.

ಮೂರನೆಯ ದಿವಸ ಜಾನಕೀರಾಮನ ಮಾವನವರ ವಿಳಾಸಕ್ಕೆ ಒಂದು ಕಾಗದ ಬಂತು. ಒಡೆದು ನೋಡಿ ಹಿಗ್ಗಿನಿಂದ ಕುಣಿದರು 'ಸದ್ಯ ಅಪಘಾತವಾಗಿಲ್ಲ' ಎಂದು ಉದ್ಗಾರ ತೆಗೆದರು.

ಕಾಗದದಲ್ಲಿ ಎರಡೇ ಪಂಕ್ತಿಯಿತ್ತು.

"ನನ್ನನ್ನು ಮರೆತುಬಿಡಿ"

ಅಂಚೆಯ ಮೊಹರು ಬೆಂಗಳೂರಿನದಾಗಿತ್ತು.

ಎಲ್ಲರೂ ಮರೆಯಲೆತ್ನಿಸಿದರು. ಆದರೆ

ಕುಮ್ಮಿ............?............?............?



# ದೊಡ್ಡ ಮನುಷ್ಯ

ಸಂಜೆಯ ಆಗಮವನ್ನು ಬಯಸುವುದು ಕನ್ನೈದಿಲೆ ಮಾತ್ರವಲ್ಲ. ಅದರ ಜತೆಗೆ ಸುಬ್ಬು, ನನ್ನನ್ನೂ ಸೇರಿಸಿಕೊಳ್ಳಬೇಕು. ದಿನಬಿಟ್ಟು ದಿನ ನಾವು ತಪ್ಪದೆ ಸಿನೀಮಾಗೆ ಹೋಗುವ ಚಟ ಬೆಳಸಿಕೊಂಡಿದ್ದೆವು. ಆದರೆ ಈಗ ಸಿನೀಮಾ ಮಂದಿರಗಳ ಬಳಿಗೆ ಕಾಲಿಡುವಂತಿರಲಿಲ್ಲ. ಯುದ್ಧದ ದೆಸೆಯಿಂದ ಎಲ್ಲರ ಕೈಯಲ್ಲಿಯೂ ಹಣ. ಆ ಹಣ ಕರಗಿಸುವುದಕ್ಕೆ ಸಿನೀಮಾ ಒಂದು ಸಾಧನ. ಜತೆಗೆ ಸಿನೀಮಾ ನೋಡಿ ನೋಡಿ ಅವುಗಳ ಹಣೇಬರಹ ಚೆನ್ನಾಗಿ ಅರ್ಥವಾಗಿತ್ತು. ಕಂಟೋನ್ಮೆಂಟಿನ ತುಂಬ ಬಿಂಗ್ ಕ್ರಾಸ್ಬಿ ಹಾಡುಗಾರಿಕೆ ಚಿತ್ರಗಳು, ಎಲೀನಾರಾ ಪೊವೆಲ್, ಕಾರ್ಮೆನ್ ಮಿರಾಂಡಾ ಕುಣಿತದ ಚಿತ್ರಗಳು. ಮೂಕಿ ದಿವಸಗಳ ಎಮಿಲ್ ಜಾನಿಂಗ್ಸ್, ಮೇರಿ ಪಿಕ್‌ಫರ್ಡ್, ಲಾನ್‌ಚೆನಿ ಕಾಣೆಯಾಗಿದ್ದರು. ಇನ್ನು ಸಿಟಿ ಸಿನಿಮಾಗಳಿಗೆ ಹೋಗೋಣವೆಂದರೆ 'ಸಜನಿ ಸಾಜನ್' ಭಜನೆಯ ಹಿಂದೀ ಚಿತ್ರಗಳು, 'ವೇಶ್ಯೆ, ಸನ್ಯಾಸಿಯ'ರ ತಮಿಳು ಚಿತ್ರಗಳು, 'ಗಂಡ, ಹೆಂಡತಿ – ಸೂಳೆ'ಯರ ತೆಲುಗು ಚಿತ್ರಗಳು ತಲೆಬೇಸರ ಹುಟ್ಟಿ

ಸಿದ್ದವು. ಸಿನೀಮಾಗೆ ಹೋಗಿ ವೃಥಾ ದುಡ್ಡುತೆತ್ತು, ಆಸ್ಪ್ರೊ ನುಂಗಿ, ಮೈ-ಮನಸ್ಸು ಎರಡೂ ಕೆಡಿಸಿಕೊಂಡು ಬರುವುದಕ್ಕಿಂತ ಹಾಯಾಗಿ ಊರಾಚೆ ಗಾಳಿ ಸವಾರಿ ಹೋಗುವುದೇ ಶ್ರೇಯಸ್ಕರವೆಂದು ನಿರ್ಧರಿಸಿದೆವು. ಹಣಕ್ಕೆ ಹಣವೂ ಉಳಿಯಿತು; ಆರೋಗ್ಯವೂ ಸುಧಾರಿಸಿತು.

ಗಾಳಿ ಸಂಚಾರದಿಂದ ಇನ್ನೊಂದು ಪ್ರಯೋಜನವೂ ದೊರೆತಿತ್ತು. ಎರಡು ಮೂರು ತಾಸುಗಳ ಹರಟೆಯಲ್ಲಿ ಅನೇಕ ಉಪಯುಕ್ತ ವಿಷಯಗಳ ಚರ್ಚೆಯಾಗುತ್ತಿತ್ತು. ನಮಗೆ ಗೋಚರವಾಗದಂತೆ ಹೊಸ ಭಾವಗಳು ಸುಳಿಯುತ್ತಿದ್ದವು. ನಮ್ಮಲ್ಲಿ ಇಂಥ ದಿವ್ಯಜ್ಞಾನ ಅಡಕವಾಗಿತ್ತೇ ಎಂದು ನಾವೇ ಹಲವು ಸಲ ಆಶ್ಚರ್ಯಪಡುತ್ತಿದ್ದೆವು. ಗಾಳಿ ಸಂಚಾರ ನಮಗೆ ಆತ್ಮಧೈರ್ಯವನ್ನು ಹುಟ್ಟಿಸಿತೆಂದರೆ ಉತ್ಪ್ರೇಕ್ಷೆಯಲ್ಲ.

ಒಂದೊಂದು ದಿನ ನರಸಿಂಹಮೂರ್ತಿ ನಮ್ಮ ಜತೆ ಬರುತ್ತಿದ್ದ. ಇಬ್ಬರ ಜತೆಗೆ ಇನ್ನೊಬ್ಬ ಸೇರಿದಾಗ ಚರ್ಚೆ ಲಘುವಾಗುತ್ತಿತ್ತು. 'ಇಬ್ಬರು ಸಂಗ ; ಮೂವ್ವರು ಗುಂಪು (Two is Company; three is a crowd) ಎನ್ನುವ ನಾಣ್ಣುಡಿ ನಿದರ್ಶನಕ್ಕೆ ಬರುತ್ತಿತ್ತು.

ಗ್ರಂಥಾವಲೋಕನ, ಪಾಂಡಿತ್ಯದಲ್ಲಿ ನಾನೂ ಸುಬ್ಬೂ ನರಸಿಂಹ ನಿಗಿಂತ ಎಷ್ಟೋ ಮೇಲು. ಆದರೆ ಅವನ ಲೋಕಾನುಭವ ನಮಗಿರಲಿಲ್ಲ. ತಾನು ಕಂಡ ವ್ಯಕ್ತಿಗಳು, ಅವರ ನಡತೆ, ನೀತಿ, ಅನುಭವ – ತನ್ನ ಗಮನಕ್ಕೆ ಬಂದ ಸ್ವಾರಸ್ಯ ಪ್ರಸಂಗಗಳು, ಸನ್ನಿವೇಶಗಳನ್ನು ನರಸಿಂಹ ಚಿತ್ರವತ್ತಾಗಿ ಬಣ್ಣಿಸುತ್ತಿದ್ದ. ಯಾರಾದರೂ ಕಥೆಗಾರರು ಆಗ ನಮ್ಮ ಜತೆ ಇರುತ್ತಿದ್ದರೆ ನರಸಿಂಹನ ನಿರೂಪಣೆಯಿಂದ ಹಲವು ಪ್ರಸಂಗಗಳನ್ನೆತ್ತಿಕೊಂಡು ಸುಂದರ ಕಥೆಗಳನ್ನು ಹೆಣೆಯಬಹುದಾಗಿತ್ತು.

ನರಸಿಂಹ ಇನ್‌ಷ್ಯೂರೆನ್ಸ್ ಇಲಾಖೆಯಲ್ಲಿ ಕೆಲಸದಲ್ಲಿದ್ದ. ಸಂಸಾರ ದೊಡ್ಡದು. ಸಂಬಳ ಸಾಲುತ್ತಿರಲಿಲ್ಲ. ಲಂಚ ಹೊಡೆದು ಹೊಟ್ಟೆ ತುಂಬಿಸಿಕೊಳ್ಳುವುದು ತಪ್ಪು ಎನ್ನುವ ನೀತಿಯ ಕಾಟ ಬೇರೆ. ವಿರಾಮ ವೇಳೆಯಲ್ಲಿ ಇನ್‌ಷ್ಯೂರೆನ್ಸ್ ಕೇಸುಗಳನ್ನು ಹಿಡಿದು ಹಾಗೂ ಹೀಗೂ ನಾಲ್ಕು ನ್ಯಾಯವಾದ ಕಾಸು ಸಂಪಾದಿಸುತ್ತಿದ್ದ.

ಒಂದು ದಿನ ಅವನೂ ಬಂದ. ಮೂವ್ವರೂ ಗಾಳೀಯಾತ್ರೆ ಹೊರ

ಟೆವು. ಆರೆಂಟು ಮೈಲಿಯಾದರೂ ವೇಗವಾಗಿ ನಡೆಯಬೇಕೆಂದು ಮೊದಲೇ ನಿರ್ಧರಿಸಿದ್ದೆವು. ಯಾತ್ರೆಗೆ ತಯಾರಿಯಾಗಲೆಂದು ಗುಂಡಪ್ಪನ ಹೋಟೆಲಿನಲ್ಲಿ ಒಂದೊಂದು ಮಸಾಲೆದೋಸೆ, ಒಂದೊಂದು ಪ್ಲೇಟ್ ದಂರೋಟ್, ನೆಂಚಿಕೊಳ್ಳುವುದಕ್ಕೆ ಒಂದೆರಡು ಉದ್ದಿನ ವಡೆ–ಕಾಫಿ ಹಾಕಿ, ಸಾಕಷ್ಟು 'ಕ್ಯಾಪ್ಸ್ಟನ್' ಪ್ಯಾಕೆಟ್ಟುಗಳನ್ನು ತುಂಬಿಕೊಂಡು ಹೊರಟೆವು.

ಬಳೇಪೇಟೆಯಿಂದ ಹೊರಟವರು, ಕುಮಾರಾಪಾರ್ಕಿನ ಮುಂದಿನ ರಸ್ತೆಯಲ್ಲಿ ಹಾದು, ಬಳ್ಳಾರಿ ರೋಡು ಉಕ್ಕಡವನ್ನು ಮುಟ್ಟಿ, ಅರಮನೆ ಸೇಬಿನ ತೋಟದ ರಸ್ತೆಯಲ್ಲಿ ತಾತಾ ಇನ್‌ಸ್ಟಿಟ್ಯೂಟ್ ಬಳಿಗೆ ಬಂದು ತಾತಾ ಅವರ ಶಿಲಾ ಪ್ರತಿಮೆಯ ಅಡಿಯಲ್ಲಿ ಸ್ವಲ್ಪ ವಿಶ್ರಮಿಕೊಳ್ಳಲು ಕುಳಿತೆವು. ಸುಬ್ಬೂ ತಾತಾ ಅವರ ಮೂರ್ತಿಯನ್ನು ದಿಟ್ಟಿಸಿ ನೋಡಿ.

"ಬಹಳ ದೊಡ್ಡ ಮನುಷ್ಯ" ಎಂದ.

"ಏಕೆ ಇನ್‌ಸ್ಟಿಟ್ಯೂಟ್ ಕಟ್ಟಿಸಿದ್ದಾರೆಂತಲೋ?" ಎಂದು ನಾನು ಕೇಳಿದೆ.

"ಕೋಟ್ಯಾಂತರ ರೂಪಾಯಿ ಸಂಪಾದಿಸಿದರು. ಅಷ್ಟನ್ನೂ ಜನ ಹಿತಕ್ಕೆ ಉದಾರವಾಗಿ ಕೊಟ್ಟುಬಿಟ್ಟರು. ಎಂಥ ತ್ಯಾಗ"

ಎಂದ. ಮಾತು 'ದೊಡ್ಡಸ್ತಿಕೆ'ಯ ಲಕ್ಷಣಗಳ ಪೃಥಕ್ಕರಣದ ಕಡೆ ಜಾರಿತು. ಗಾಂಧಿ, ನೆಹರೂ, ಲೆನಿನ್, ರೂಜ್‌ವೆಲ್ಟ್, ಷಾ ಮೊದಲಾದ ಹಲವು ಮಹನೀಯರು ದೊಡ್ಡವರಾದ ಬಗೆಯನ್ನು ಚರ್ಚಿಸಿದೆವು.

"ಈ ಮಹನೀಯರ ಯಾವದೂ ಗುಣವಿಲ್ಲದೆ ಮನುಷ್ಯ ದೊಡ್ಡವನಾಗುವುದಿಲ್ಲವೇ?"

ಎಂದು ನರಸಿಂಹ ಕೇಳಿದ.

"ಇವರ ಗುಣಗಳಿಲ್ಲದಿದ್ದರೆ– ಯಾವದಾದರೂ ಗುಣವಿರಲೇಬೇಕು. ಏನೂ ಗುಣವಿಲ್ಲದೆ ಮನುಷ್ಯ ದೊಡ್ಡವನೆನೆಸಿಕೊಳ್ಳಲಾರ"

ಎಂದು ನಾನು ಹೇಳಿದೆ.

"ನಾನು ಒಂದು ಕಥೆ ಹೇಳುತ್ತೇನೆ. ಒಬ್ಬ ವ್ಯಕ್ತಿಯ ಪರಿಚಯ

ಮಾಡಿಕೊಡುತ್ತೇನೆ. ಅವನು ದೊಡ್ಡ ಮನುಷ್ಯನೇ – ಸಣ್ಣ ಮನುಷ್ಯನೇ ನೀವೇ ನಿರ್ಧರಿಸಿ ಹೇಳಿ."

"ಹಾಗೇ ಆಗಲಿ."

"ಕಥೆಯೆಂದರೆ ಕಟ್ಟುಕಥೆಯಲ್ಲ. ನಡೆದ ಕಥೆ. ಒಂದಲ್ಲ ಒಂದು ದಿನ ನಿಮಗೆ ಆ ವ್ಯಕ್ತಿ ಭೆಟ್ಟಿಯಾಗಬಹುದು. ಅದಕ್ಕೋಸ್ಕರ ನಿಜವಾದ ಹೆಸರು ಹೇಳಲ್ಲ. ಅವನ ಹೆಸರು ಅತ್ರಿ ಎಂದಿಟ್ಟುಕೊಳ್ಳಿ."

"ಆಗಬಹುದು."

"'ಅತ್ರಿ ಕಂಟೋನ್ಮೆಂಟಿನ 'ಬ್ಲೂ ಷಾಪ್'ನಲ್ಲಿ ನೌಕರ. ಅಂಗಡಿ ಸಂಜೆ ಆರಕ್ಕೆ ಮುಚ್ಚಿದ ಮೇಲೆ ಅಕೌಂಟ್ಸ್ ಬರೆದು ಅವನು ಮನೆಗೆ ಹೊರಡಬೇಕಾದರೆ ರಾತ್ರಿ ಒಂಭತ್ತಾಗುತ್ತಿತ್ತು. ಒಂದೊಂದು ದಿನ ಬಸ್ ಸಿಕ್ಕುತ್ತಿತ್ತು....ಒಂದೊಂದು ದಿನ ನಡೆದುಕೊಂಡೇ ಮನೆಗೆ ಬರಬೇಕಾಗಿರುತ್ತಿತು. ಬಸವನಗುಡಿ ಕೊನೆಯಲ್ಲಿ ಮನೆ. ಹೀಗೇ ನಡೆದಿತ್ತು ಅತ್ರಿ ದುಡಿಮೆ. ಮನೆಯಲ್ಲಿ ಹೆಂಡತಿ, ಮೂರು ಮಕ್ಕಳು. ದೊಡ್ಡ ಮಗಳು ಮದುವೆಯ ವಯಸ್ಸಿಗೆ ಬಂದಿದ್ದಳು. ಉಳಿದಿಬ್ಬರು ಇನ್ನೂ ಸಣ್ಣವರು

"ಸೊಗಸಾದ ಪುಟ್ಟ ಅಣಿಯಾದ ಸಂಸಾರ."

"'ಆ ಸಂಸಾರದಲ್ಲಿ ಅತ್ರಿಯ ವಿಧವೆ ಅಕ್ಕ ಒಬ್ಬಳಿದ್ದಳು. ಅಡಿಗೆ, ಕೆಲಸ ಎಲ್ಲಾ ಆಕೆ ನಿರ್ವಹಿಸಿಕೊಂಡು ಹೋಗುತ್ತಿದ್ದಳು. ಮಕ್ಕಳನ್ನು ನೋಡಿಕೊಳ್ಳುವುದು – ಚಿಲ್ಲರೆಪಲ್ಲರೆ ಕೆಲಸ ಮಾಡುವುದು ಇಷ್ಟೇ ಅತ್ರಿ ಹೆಂಡತಿಗಿದ್ದ ಕೆಲಸಕಾರ್ಯ.'

"ಆಕೆಯೇ ಪುಣ್ಯವಂತೆ ಈ ಕಾಲದಲ್ಲಿ"

"'ಅತ್ರಿ ಹತ್ತು ಗಂಟೆಗೆ ಸ್ಕೂಲಿಗೆ ಹೋಗುವ ಹುಡುಗರ ಜತೆ ಎಲೆ ಹಾಕಿಕೊಂಡು ಊಟಮಾಡಿ ಕೆಲಸಕ್ಕೆ ಹೋಗಿಬಿಡುತ್ತಿದ್ದ. ಮಕ್ಕಳು ಸ್ಕೂಲಿಗೆ ಹೋಗಿಬಿಡುತ್ತಿದ್ದವು. ಅತ್ರಿ ಅಕ್ಕ, ಹೆಂಡತಿ ಇಬ್ಬರೂ ಹನ್ನೆರಡು ಗಂಟೆಹೊತ್ತಿಗೆ ಊಟ ಮುಗಿಸಿಬಿಡುತ್ತಿದ್ದರು. ಅತ್ರಿ ಅಕ್ಕ ಸ್ವಲ್ಪ ಹೊತ್ತು ಅಡಿಗೆ ಮನೆಯಲ್ಲೇ ತೋಳಿಗೆ ತಲೆಕೊಟ್ಟು ನಿದ್ರೆಮುಗಿಸಿ,

ರಂಗೂಬಾಯಿ ಮನೆಗೆ ಹರಟೆ, ಹೂಬತ್ತಿ ಹೊಸೆಯುವುದಕ್ಕೆ ಹೋಗುತ್ತಿದ್ದಳು. ಅತ್ರಿ ಹೆಂಡತಿ ಪದ್ಮಾ ಒಬ್ಬಳೇ ಮನೆಯಲ್ಲಿ.'

"ಅವಳೂ ಯಾರ ಮನೆಗಾದರೂ ಹರಟೆಗೆ ಹೋಗಬೇಕಾಗಿತ್ತು."

"'ಹೋಗುತ್ತಿದ್ದಳು. ಅವಳ ಗೆಳತಿ ಸ್ತ್ರೀಸಮಾಜದ ಸದಸ್ಯೆ. ಪದ್ಮನನ್ನೂ ಸದಸ್ಯೆ ಮಾಡಿದಳು. ಪದ್ಮಾ ಬೆತ್ತದ ಕೆಲಸ ಕಲಿಯುವುದಕ್ಕಾರಂಭಿಸಿದಳು. ಎರಡು ತಿಂಗಳಲ್ಲಿ ಬುಟ್ಟಿ, ತಟ್ಟಿ, ಮೊದಲಾದವುಗಳನ್ನು ಹೆಣೆಯುವುದಕ್ಕೆ ಕಲಿತಳು. ನಾಲ್ಕಾರು ತಿಂಗಳಲ್ಲಿ ಬೆತ್ತದ ಕೆಲಸದಿಂದ ಅವಳಿಗೆ ಹತ್ತಿಪ್ಪತ್ತು ರೂಪಾಯಿ ವರಮಾನವೂ ಬರತೊಡಗಿತು.'

"ಹಾಗಾದರೆ ಅತ್ರಿಗೆ ಸಂತೋಷವೇ ಆಗಿರಬಹುದು."

"'ಆಗದೆ ಇರುತ್ತದೆಯೇ? ತನ್ನ ಸಂಪಾದನೆಯಿಂದಲೇ ಮಕ್ಕಳಿಗೆ ಬಟ್ಟೆಬರೆ ಮಾಡಿಸುತ್ತಿದ್ದಳು. ತಾನೂ ಒಳ್ಳೆ ಸೀರೆ, ಕುಪ್ಪಸ ಕೊಂಡಳು. ಗಂಡ ಥಂಡಿಯಲ್ಲಿ ಹೋಗಿಬರುತ್ತಾರೆಂದು, ಒಂದು ಉಲ್ಲನ್ ಮಫ್ಲರ್ ಹಾಕಿಕೊಟ್ಟಳು. ಆದರೆ ಪದ್ಮಾ ಸಮಾಜಕ್ಕೆ ಹೋಗಿಬರುವುದು ಅತ್ರಿ ಅಕ್ಕನಿಗೆ ಸೇರುತ್ತಿರಲಿಲ್ಲ. ಹಳೆಯ ಕಾಲದ ಹೆಂಗಸು, ಇಂಥವುಗಳನ್ನು ಕಂಡರೆ ಗೊಣಗೊಣ ಮಾಡುವುದು ಸ್ವಾಭಾವಿಕವೆಂದು ಯಾರೂ ಆಕೆಯನ್ನು ಅಷ್ಟು ಗಮನಿಸುತ್ತಿರಲಿಲ್ಲ.'

"ಅದು ಸರಿ."

"'ಅತ್ರಿ ಅಕ್ಕನಿಗೆ ಕೋಪ ಬರಿಸುತ್ತಿದ್ದುದು ಪದ್ಮಾ ರಾತ್ರಿ ೯ ಗಂಟೆ ೧೦ ಗಂಟೆಗೆ ಮನೆಗೆ ಬರುತ್ತಿದ್ದುದು. ಅತ್ರಿ ಮನೆ ತಲುಪುವುದಕ್ಕೆ ಅರ್ಧ ಗಂಟೆ ಮುಂಚೆ ಅವಳು ಎಷ್ಟೋ ದಿವಸ ಮನೆಗೆ ಬರುತ್ತಿದ್ದಳು. ಇದನ್ನು ಸಹಿಸಿ ಸಾಕಾಗಿ ಒಂದು ದಿನ ಅತ್ರೀಗೆ ಅವನಕ್ಕ ಈ ವಿಷಯ ಹೇಳಿ, ದಂಡಿಸೆಂದು ಆಜ್ಞೆ ವಿಧಿಸಿದಳು. ಪದ್ಮಾ ಕೊಟ್ಟ ಸಮಾಧಾನ ಅತ್ರೀಗೆ ತೃಪ್ತಿಯನ್ನುಂಟುಮಾಡಿತು. ಸಮಾಜದಲ್ಲಿ ತನ್ನ ಹೆಂಡತಿಗೆ ಒಂದು ಕೆಲಸ ಸಿಕ್ಕಿ ಅದರಿಂದ ೪೦–೫೦ ರೂಪಾಯಿ ಬಂದರೆ ಒಳ್ಳೆಯದೇ ಆಯಿತೆಂದು ಭಾವಿಸಿ ಅವನು ಅಕ್ಕನನ್ನು ಸಮಾಧಾನ ಪಡಿಸಿದ. 'ಎಲ್ಲಾದರೂ ಹಾಳಾಗಿ ಹೋಗಿ – ನಂಗೇನು. ಇವತ್ತಿದ್ದು ನಾಳೆ ಸಾಯೋ ಮುದಿ ಮುಂಡೇಗೆ' ಎಂದು ಶಪಿಸಿಕೊಂಡು ಅತ್ರಿ ಅಕ್ಕ ತೆಪ್ಪಗಾದಳು.'

"ಈ ಮುದುಕೀರೇ ಹೀಗೆ" ಎಂದು ಸುಬ್ಬು ಗೊಣಗುಟ್ಟಿದ. ಅವನಿಗೆ ತನ್ನ ಮನೆಯು ನೆನಪಾಗಿತ್ತು. ಪದ್ಮನ ಬಗ್ಗೆ ವಿಶೇಷ ಕನಿಕರ ಮೂಡಿತ್ತು.

"ಮುಂದೆ" ಎಂದು ನಾನು ಮಾಟಿದೆ.

"'ಹೀಗೆ ನಾಲ್ಕಾರು ತಿಂಗಳು ಸಾಗಿತು. ಅತ್ರಿ ಅಕ್ಕ, ಹೆಂಡತಿ ಇಬ್ಬರೂ ನಾಯಿ ಬೆಕ್ಕುಗಳಂತೆ ಕಾದಾಡತೊಡಗಿದರು. ಹತ್ತಿದ ಜಗಳ ಹರಿಯುತ್ತಿರಲಿಲ್ಲ. ದುಡಿದು ದಣಿದು ಬೇಸತ್ತು ಅತ್ರಿ ಮನೆಗೆ ಬಂದರೆ ಇವರ ವ್ಯಾಜ್ಯ ಪರಿಹರಿಸುವುದೇ ಅವನಿಗೆ ದೊಡ್ಡ ಕೆಲಸವಾಗುತ್ತಿತ್ತು.'

"ಮನೇಲಿ ನಿತ್ಯ ಕೈಲಾಸಂ ನಾಟಕ ನಡೀತಿತ್ತು ಅನ್ನು."

"'ಹೂ – ಹಾಗೇ ಇತ್ತು. ಒಂದು ದಿನ ಅತ್ರಿ ಎಂದಿನಂತೆ ರಾತ್ರಿ ೧೦ ಗಂಟೆಗೆ ಮನೆಗೆ ಬಂದ. ಮಕ್ಕಳು ಊಟ ಮುಗಿಸಿ ಮಲಗಿದ್ದವು. ಅಕ್ಕ ದೇವರ ಮನೆಯಲ್ಲಿ ಮಲಗಿದ್ದಳು. ಅವಳಿಗೂ ನಿದ್ದೆ ಹತ್ತಿಬಿಟ್ಟಿತ್ತು. ಅತ್ರಿ ಬಾಗಿಲು ತಟ್ಟಿದಾಗ ಆಕೆಯೇ ಬಂದು ಬಾಗಿಲು ತೆಗೆದಳು. ಅತ್ರಿ ಕೋಟು, ರುಮಾಲು ಕಳಚುತ್ತಾ

'ಪದ್ಮಾ ಮಲಗಿಬಿಟ್ಟಳೇನು?' ಎಂದ.

'ಯಾವ ಪದ್ಮಾ – ನಿನ್ನ ರಾಣೀನೇ ...'

'ಅಲ್ಲ ನಿನ್ನ ನಾದಿನಿ.'

'ಅವರಿನ್ನೂ ಮನೆಗೆ ಬರುವುದಕ್ಕೆ ಪುರಸತ್ತು ಆಗಿಲ್ಲ. ಚೆತ್ತ ಸಿಗೀತಿದ್ದಾರೆ.

'ಇನ್ನೂ ಮನೆಗೆ ಬಂದಿಲ್ವೆ?'

'ಇಲ್ಲಾಪ್ಪಾಂದ್ರೆ....ನೀನೇ ಹುಡುಕಿ ನೋಡು'

ಅತ್ರೀಗೆ ಸ್ವಲ್ಪ ಗಾಬರಿಯಾಯಿತು. ಕೋಟನ್ನೂ ಹಾಕಿಕೊಳ್ಳದೆ ಸಮಾಜಕ್ಕೆ ಓಡಿದ. ರಾತ್ರಿ ಕಾವಲಿನ ಆಳು

'ಪದ್ಮಮ್ಮಾವ್ರು ಇವತ್ತು ಬರ್ನೇ ಇಲ್ಲ ಬುದ್ಧಿ' ಎಂದು ಹೇಳಿದ.

ಅತ್ರಿ ದುಗುಡ ಹೆಚ್ಚಾಯಿತು.

ಸಮಾಜದ ಸೂಪರಿಂಟೆಂಡೆಂಟ್ ಮನೆಗೋಡಿದ.

'ನಾನು ಇವತ್ತು ಸಮಾಜಕ್ಕೆ ಹೋಗಲಿಲ್ಲ. ನನಗೆ ಗೊತ್ತಿಲ್ಲ.' ಎಂದು ಆಕೆ ಹೇಳಿದರು.

"'ಅತ್ರಿ ಹುಚ್ಚನಂತೆ ಮನೆಗೆ ಬಂದು ತಲೆಯ ಮೇಲೆ ಕೈಹೊತ್ತು ಕುಳಿತುಬಿಟ್ಟ.'"

"ಪೋಲೀಸ್ ಕಂಪ್ಲೇಂಟ್ ಕೊಡಲಿಲ್ಲವೇ?"

"'ಪೋಲೀಸಿಗೆ ತಿಳಿಸು ಎಂದು ಅಕ್ಕನೂ ಬಲವಂತ ಮಾಡಿದಳು. ಅತ್ರಿ ಒಪ್ಪಲಿಲ್ಲ. ಈಗ ಬರಬಹುದು, ಆಗ ಬರಬಹುದು ಎಂದು ನಿರೀಕ್ಷಿಸುತ್ತ ಕುಳಿತ. ಇರುಳು ಜಾರಿ ಹಗಲು ಹರಿಯಿತು. ಪದ್ಮನ ಸುಳಿವೇ ಇಲ್ಲ. ಬೆಳಿಗ್ಗೆ ಮತ್ತೆ ಸಮಾಜಕ್ಕೆ ಹೋಗಿ ತನಿಖೆ ನಡೆಸಿದ. 'ಬೆತ್ತದ ಪಾಠಹೇಳುವ ಶಾಮಯ್ಯನೂ ನಿನ್ನೆ ಸಮಾಜಕ್ಕೆ ಬಂದಿರಲಿಲ್ಲ' ಎಂಬುದು ತಿಳಿಯಬಂತು. ಶಾಮಯ್ಯನ ಮನೆ ವಿಚಾರಿಸಿಕೊಂಡು ಅಲ್ಲಿಗೆ ಹೋದ. ಶಾಮಯ್ಯನ ಹೆಂಡತಿ ಎದೆಎದೆ ಬಡಿದುಕೊಳ್ಳುತ್ತ ಕುಳಿತಿದ್ದಳು. ಅವಳನ್ನು ವಿಚಾರಿಸಿದಲ್ಲಿ 'ಯಾವೋಳೋ ಸಮಾಜದೋಳು ದಿನಾದಿನಾ ಇಲ್ಲಿಗೆ ಬರುತ್ತಿದ್ದಳು. ಅವಳೇ ಹಾರಿಸಿಕೊಂಡು ಹೋಗಿರ್ಬ್ಬೇದು' ಎಂದಳು. ಅತ್ರಿ ಆಕೆಗೆ ತನ್ನ ಪರಿಚಯವನ್ನೂ ಮಾಡಿಕೊಡದೆ ಮನೆಗೆ ಬಂದ. ಅಕ್ಕ ಅತ್ರಿಯನ್ನು ಹೀನಾಮಾನ ಬೈದಳು. ಪದ್ಮನಿಗಂತೂ ಎಲ್ಲ ಬೈಗಳ, ಶಾಪವೂ ಆಯಿತು. ಅತ್ರಿ ದಂಗುಹಿಡಿದವನಂತೆ ಕುಳಿತುಬಿಟ್ಟ.

'ಹೋದೋಳು ಹೋದಳು ಹಾಳುರಂಡೆ. ಏಳಪ್ಪಾ ಊಟಮಾಡು— ಸರಿಯಾದ ಹುಡುಗಿ ನೋಡಿ ಬೇರೆ ಮದುವೆಮಾಡುತ್ತೇನೆ' ಎಂದು ಅಕ್ಕ ಸಮಾಧಾನ ಹೇಳಿದಳು. ಅತ್ರಿಗೆ ಪ್ರಾಣವೇ ಹೋದಂತಾಯಿತು. ನಿರ್ವಾಹವಿಲ್ಲದೆ ಕೆಲಸಕ್ಕೆ ಹೋಗಿ ಬರುತ್ತಿದ್ದ. ಐದು ತಿಂಗಳು ಕಳೆದರೂ ಪದ್ಮನ ಸುದ್ದಿ ಸಮಾಚಾರವಿಲ್ಲ. ಒಂದು ದಿನ ಪದ್ಮನ ಗೆಳತಿ ಸರೋಜಮ್ಮ ತಾನೇ ಅತ್ರಿ ಅಕ್ಕನನ್ನು ಹುಡುಕಿಕೊಂಡು ಬಂದಳು.

'ನಿಮ್ಮ ಪದ್ಮಾ ಬೊಂಬಾಯಲ್ಲಿ ಇದ್ದಾಳಂತಮ್ಮಾ' ಎಂದಳು.

'ಹಾ! ಯಾರು ಹೇಳಿದರು.'

'ನಮ್ಮಣ್ಣ ರಜೆಗೋಸ್ಕರ ಬಂದಿದ್ದಾನೆ. ಮಾತುಂಗದಲ್ಲಿ ಅವನ ರೂಮಿನ ಹತ್ತಿರವೇ ಒಂದು ಮನೆಯಲ್ಲಿದ್ದಾಳಂತೆ.'

‘ ಯಾವ ಜಾತಿ ? ’

‘ ಯಾವ ಜಾತಿಯೋ ನಮ್ಮಣ್ಣ ಕಾಣ. ಅವನ ಪರಿಚಯ ನಮ್ಮಣ್ಣನಿಗಿಲ್ಲ.

ಅತ್ರಿಯ ಕಿವಿಯ ಮೇಲೆ ಈ ಸುದ್ದಿ ಬಿದ್ದಕೂಡಲೇ ಅವನು ಸರೋಜಮ್ಮನ ಅಣ್ಣನನ್ನು ಕಂಡು ತನಗೆ ತಿಳಿದುಬಂದ ಸುದ್ದಿ ನಿಜವೆಂದು ದೃಢಪಡಿಸಿಕೊಂಡ.

‘ ನನಗೊಂದು ಉಪಕಾರ ಮಾಡುವಿರಾ ಸಾರ್. ’

‘ ಹೇಳಿ ಅತ್ರಿ. ಅವಶ್ಯಕವಾಗಿ ಆಗಲಿ. ’

‘ ನೀವು ಬೊಂಬಾಯಿಗೆ ಯಾವಾಗ ಹಿಂದಿರುಗುತ್ತೀರಿ.’

‘ ಇನ್ನೊಂದು ವಾರದಲ್ಲಿ. ’

‘ ನಾನೂ ಬರುತ್ತೇನೆ. ನನ್ನೂ ಕರೆದುಕೊಂಡು ಹೋಗಿ ಆ ಮನೆ ತೋರಿಸಿ. ’

‘ ಆಗಲಿ. ಬೇಡವೆಂದವರು ಯಾರು. ’

ಅತ್ರಿ ನಿರ್ಧಾರಕೇಳಿ ಅವನಕ್ಕ ಕಿಡಿಕಿಡಿಯಾದಳು. ‘ನಾಯಿ ಮುಟ್ಟಿದ ಮಡಕೆಯನ್ನು ಪುತ್ತೆ ಮನೆಯಲ್ಲಿ ಬಳಸುವುದೇ ’ ಎಂದು ಗರ್ಜಿಸಿದಳು.’ ”

“ ಅತ್ರಿ ಏನು ಮಾಡಿದ.”

“ ‘ಏನೂ ಮಾಡಲಿಲ್ಲ. ಸರೋಜಮ್ಮನ ಅಣ್ಣನ ಜತೆಗೆ ಮುಂಬಯಿಗೆ ಪ್ರಯಾಣ ಬೆಳಸಿದ. ಅವನು ತಿಳಿಸಿದ ಸಂಗತಿ ನಿಜವಾಗಿತ್ತು. ಪದ್ಮ, ಶಾಮಯ್ಯ ಮನೆ ಮಾಡಿಕೊಂಡು ಮಾತುಂಗದಲ್ಲಿದ್ದರು. ಅತ್ರಿ ಸಮಯ ಕಾದ. ಒಂದು ದಿನ ಮಧ್ಯಾನ್ಹ ಶಾಮಯ್ಯ ಹೊರಗೆ ಹೋದುದನ್ನು ನೋಡಿ ಅವರ ಮನೆ ಹೊಕ್ಕ.

ಅತ್ರಿಯನ್ನು ನೋಡಿ ಪದ್ಮ ಚಕಿತಳಾದಳು.

‘ ನಾನು, ಪದ್ಮಾ . . . ಗುರುತು ಸಿಕ್ಕಲಿಲ್ಲವೇ ? ’

ಪದ್ಮ ಅಳುತ್ತ ನಿಂತಳು.

‘ ನಾನು ನಿನಗೇನು ಅನ್ಯಾಯ ಮಾಡಿದೆ. ಪದ್ಮಾ . . . ನಾನು ಹೋಗಲಿ . . . ಪಾಪ ಕಾಣದ ನಮ್ಮ ಮಕ್ಕಳು ನಿನಗೆ ಯಾವ ಅನ್ಯಾಯ ಮಾಡಿದವು. ’

ಪದ್ಮಾ ಉತ್ತರ ಕೊಡುವ ಗೋಜಿಗೆ ಹೋಗಲಿಲ್ಲ.

'ನಾನೊಂದು ಗಾಣದೆತ್ತು ಎಂದು ನಿನಗೆ ತಿರಸ್ಕಾರ ಹುಟ್ಟಿತೇ? ಹೌದು–ನಿನ್ನ ಸಿನೀಮಾ ನಾಟಕಕ್ಕೆ ನಾನು ಕರೆದುಕೊಂಡು ಹೋಗುತ್ತಿರಲಿಲ್ಲ. ನಿನ್ನ ಬೇಸರ ಪರಿಹರಿಸುವುದಕ್ಕೆ ಪ್ರಯತ್ನಿಸುತ್ತಿರಲಿಲ್ಲ. ಎಷ್ಟೋ ದಿವಸ ನನ್ನ ಆಯಾಸದಲ್ಲಿ ನಿನ್ನ ಸರಿಯಾಗಿ ಮಾತೂ ಆಡಿಸುತ್ತಿರಲಿಲ್ಲ.'

ಪದ್ಮಾ ಗಟ್ಟಿಯಾಗಿ ಅಳುತ್ತಿದ್ದಳು.

'ಆದರೆ ನನ್ನ ದುಡಿಮೆ ಯಾರಿಗೋಸ್ಕರ. ನೀನೂ ಮಕ್ಕಳೂ ಚೆನ್ನಾಗಿದ್ದರೆ ಸಾಕು ಎಂದಲ್ಲವೇ? ನಿಮ್ಮನ್ನು ನೋಡುವ ಸೌಖ್ಯ ಒಂದು ಬಿಟ್ಟು ನನಗೆ ಬೇರೆ ಸೌಖ್ಯ ಯಾವದಿದೆ? ನೀನು ತಿಳಿದಿರುವ ಹಾಗೆ ನಾನು ನನಗಾಗಿ ಏನಾದರೂ ಬಯಸಿದ್ದೇನೆಯೇ—ಕೊನೆಗೆ ಒಂದು ಹೊಸ ಕೋಟು ಹೊಲಸಿಕೊಂಡಿದ್ದೇನೆಯೇ?'

'ಇಲ್ಲ' ಎಂದಳು.

'ನನ್ನ–ಮಕ್ಕಳನ್ನ ಹೀಗೇಕೆ ಕಾಡುಪಾಲು ಮಾಡಿಬಂದೆ. ನೀನು ಹೊರಟುಹೋದ ಮೇಲೆ ಮಕ್ಕಳಿಗೂ ವಿಷಕೊಟ್ಟು ನಾನೂ ವಿಷ ಕುಡಿದು ಈ ಹಾಳು ಬಾಳನ್ನು ಮುಗಿಸಿಬಿಡೋಣ' ಎಂದು ಯೋಚಿಸಿದೆ.

'ಅಯ್ಯೋ!' ಎಂದಳು.

'ಆದರೆ ಅದು ಹೇಡಿಯ ಮಾರ್ಗ. ರಾಕ್ಷಸ ಮಾರ್ಗ. ದೇವರಂಥ ಮಕ್ಕಳನ್ನು ಕೊಲ್ಲುವುದಕ್ಕೆ ನನಗೆ ಯಾವ ಅಧಿಕಾರ. ನಾನು ಬೇಡವಾಗಿ ನೀನು ಹೊರಟುಹೋದರೆ ನಿನ್ನನ್ನು ಆಕ್ಷೇಪಿಸುವುದಕ್ಕೆ ತಾನೆ ನನಗೆ ಯಾವ ಅಧಿಕಾರ. ಗಂಡು ಹೆಣ್ಣನ್ನು ಕೂಡಿಸುವುದು ಮದುವೆಯ ಕಟ್ಟಲ್ಲ–ಪ್ರೇಮದ ಕಟ್ಟು. ಆ ಕಟ್ಟು ಸಡಿಲವಾದ ಮೇಲೆ ನೀನು ಮಾಡಿದುದು ತಪ್ಪೆಂದು ಯಾರು ಹೇಳಬಲ್ಲರು. ನಾನು ನಿನ್ನ ಆಕ್ಷೇಪಿಸುವುದಿಲ್ಲ ಪದ್ಮಾ. ಈಗ ನೀನಿರುವುದು ನಿನಗೆ ಸಂತೋಷಕರವಾಗಿದೆಯೆಂದು ಹೇಳಿಬಿಡು–ಮೂರರ ಗಾಡಿಗೆ ನಾನು ಹಿಂತಿರುಗುತ್ತೇನೆ. ನನ್ನ ಹಣೆಯಲ್ಲಿ ಬರೆದಿರುವುದನ್ನು ನಾನು ಅನುಭವಿಸಿಕೊಳ್ಳುತ್ತೇನೆ. ನೀನು ಬರುವ ಹಾಗಿದ್ದರೆ ಕರೆದುಕೊಂಡುಹೋಗಲು ಬಂದಿದ್ದೇನೆ.'

'ನನ್ನ ಕ್ಷಮಿಸಬಲ್ಲಿರಾ?'

'ದೇವರನ್ನು ಕೇಳು. ನಾನು ಯಾರು? ಒಂದು ಅಲ್ಪ ಜಂತು.'

'ನೀವೇ ದೇವರು.'

ಎಂದು ಪದ್ಮಾ ಅತ್ರಿಯ ಕಾಲುಗಳ ಮೇಲೆ ಬಿದ್ದಳು. ತನ್ನ ಕಣ್ಣೀರಿನಿಂದ ಅವನ ಕಾಲುಗಳನ್ನು ತೊಳೆದು, ಮುದ್ದಿಟ್ಟಳು. ಅತ್ರಿ,

'ಹಾಗಾದರೆ ಹೊರಡು' ಎಂದ. ಪದ್ಮಾ ಮರುಮಾತಾಡದೆ ಕೈಗೆ ಸಿಕ್ಕಿದ ನಾಲ್ಕು ಸೀರೆಗಳನ್ನು ಸುತ್ತಿಕೊಂಡು ಹೊರಟಳು. ಹೆಂಡತಿಯೊಂದಿಗೆ ಅತ್ರಿ ಮೂರು ಗಂಟೆ ರೈಲು ಹತ್ತಿಯೇ ಬಿಟ್ಟ.' "

"ಆಮೇಲೆ ..." ಎಂದು ನಾನೂ ಸುಬ್ಬೂ ಆಶ್ಚರ್ಯದಿಂದ ಕೇಳಿದೆವು.

" 'ಆಮೇಲೇನು? ಊರು ತಲುಪಿದರು. ಈಗ ಸುಖವಾಗಿದ್ದಾರೆ. ಪದ್ಮಳಂತಹ ಗೃಹಿಣಿ ಜಗತ್ತಿನಲ್ಲೇ ಇಲ್ಲ.'

"ಅತ್ರಿ ಅಕ್ಕ ಸುಮ್ಮನಿದ್ದಳೇ?"

" 'ಗೊಂದಲ ಹಾಕಿದಳು. ಅದಕ್ಕೆ ಅತ್ರಿ ಏನು ಹೇಳಿದ ಬಲ್ಲಿರಾ— 'ನೋಡು ಅಕ್ಕ – ಪದ್ಮಾ ಒಂದು ತಪ್ಪು ಮಾಡಿದ್ದಾಳೆ – ದೊಡ್ಡ ತಪ್ಪು. ಈಗವಳನ್ನು ಕ್ಷಮಿಸದೆ ಮನೆಯಿಂದ ಆಚೆದೂಡಿದರೆ ಕೆಟ್ಟು ಹೋಗುತ್ತಾಳೆ'

'ಅಪಕೀರ್ತಿಗೇನು ಮಾಡುತ್ತೀಯೋ ಮೂಳಾ.'

'ನಾಳೆ ಅವಳ ಪ್ರೇಮ ಪ್ರಕರಣ ಮುಗಿದು, ಅವಳು ಬೀದಿ ಸೂಳೆಯಾಗಿ ನಿಂತರೆ ಆಗೋ ಅಪಮಾನಕ್ಕಿಂತ ಇದು ಹೆಚ್ಚೇ. ಕ್ಷಮೆಯಿಂದ ಅವಳು ಪುನೀತಳಾಗುತ್ತಾಳೆ—ಮುಂದೆ ಅವಳು ಎಲ್ಲರಿಗಿಂತ ಹೆಚ್ಚು ಶೀಲವತಿ ಅನಿಸಿಕೊಳ್ಳುತ್ತಾಳೆ.'

ಅತ್ರಿ ಅಕ್ಕನಂಥ ರೂಕ್ಷ ಪ್ರಾಣಿ ಕೂಡ ಅವನ ವಾದಕ್ಕೆ ಬೆರಗಾಯಿತು. ಅದು ವಾದದ ಮಹಿಮೆಯಲ್ಲ—ಹೃದಯದ ಹಿರಿಮೆ—ಈಗ ಹೇಳಿ ಅತ್ರಿ ದೊಡ್ಡ ಮನುಷ್ಯನೋ ಸಣ್ಣ ಮನುಷ್ಯನೋ?"

"ಯೇಸೂ ಮಾಗ್ದಾಲೀನಾ ಎನ್ನುವ ಊರಗಣಿಕೆಯ ತಪ್ಪನ್ನು ಕ್ಷಮಿಸಿದನಂತೆ. ಅತ್ರಿ ಅದಕ್ಕಿಂತಲೂ ಹೆಚ್ಚಿನದನ್ನು ಮಾಡಿದ್ದಾನೆ. ಸ್ವಸ್ತ್ರೀಯ ಮಹಾಪರಾಧವನ್ನು ಮನ್ನಿಸಿದ್ದಾನೆ. ದೊಡ್ಡ ಮನುಷ್ಯ ಯೇಕೆ- ಅವನು ಮಹಾನುಭಾವನಯ್ಯ" ಎಂದೆ.

"ನೀನೇನು ಹೇಳುತ್ತೀ ಸುಬ್ಬೂ?" ಎಂದು ಸುಬ್ಬನನ್ನು ಕೇಳಿದ.

"ಏನು ಹೇಳಲಯ್ಯಾ—ಕಣ್ಣು ಮುಂದೆ ೧೦೦೦ ಕ್ಯಾಂಡಲ್ ಪವರ್ ದೀಪ ಹಿಡಿದು, ಕಣ್ಣು ಬಿಟ್ಟು ನೋಡು ಎಂದು ಹೇಳಿದ ಹಾಗಾಯಿತು. ಕಲಿಯುಗದ ಅತ್ರಿ ಔದಾರ್ಯ, ಸತ್ಯಯುಗದ ರಾಮನಿಗೂ ಇರಲಿಲ್ಲವಲ್ಲ ಎಂದು ಯೋಚಿಸುತ್ತಿದ್ದೆ. ಕಿಟ್ಟು ಹೇಳಿದ ಹಾಗೆ 'ಅತ್ರಿ ಮಹಾನುಭಾವ.'"

ಎಂದ. ಅಂದಿನ ನಮ್ಮ ಗಾಳಿ ಸಂಚಾರದಿಂದ ದೊಡ್ಡ ಶಿಕ್ಷಣ ವಾಯಿತು. ಅತ್ರಿ ಪರಿಚಯ ಮಾಡಿಕೊಟ್ಟ ನರಸಿಂಹನನ್ನು ಮನಸಾರೆ ವಂದಿಸುತ್ತ ಮನೆಗೆ ಮರಳಿದೆವು.



# ಮೃತ್ಯುಶಾಂತಿ

ಉಸ್ಮಾನಖಾನನ ತಬಲ ಡಗ್ಗದ ಖ್ಯಾತಿ ಮೈಳೂರಿನಿಂದ ಹೊರಗೆ ದೆಲ್ಲಿಯವರೆಗೆ ಹಬ್ಬಿತ್ತು. ಅಪ್ರಸಿದ್ಧ ಮೈಳೂರು ಉಸ್ಮಾನ ಖಾನನಿಂದ ಸುಪ್ರಸಿದ್ಧವಾಗಿತ್ತು. ಡೆಲ್ಲಿ, ಲಕ್ನೋ, ಹೈದರಾಬಾದು, ಜಯಪುರದ ದೊಡ್ಡ ದೊಡ್ಡ 'ಘರಾಣೆ' ವಿದ್ವಾಂಸರ ಬೈಠಕ್ಕುಗಳಿಗೆ ಉಸ್ಮಾನ ಖಾನನ ತಬಲ ಡಗ್ಗವೇ ಇರಬೇಕು. ಜನ ತಂಬೂರಿಯೆಂದರೆ ಮಾಗಡಿ, ಕೊಲ್ಹಾಪುರ, ವೀಣೆಯೆಂದರೆ ಮೈಸೂರು, ವಾದ್ಯತಂತಿಯೆಂದರೆ ಚನ್ನಪಟ್ಟಣಗಳಿಗೆ ಧಾವಿಸುತ್ತಿದ್ದಂತೆ ತಬಲಡಗ್ಗಗಳಿಗೆ ಮೈಳೂರಿಗೆ ಬರುತ್ತಿದ್ದರು. ಪ್ರಸಿದ್ಧ ವಿದ್ವಾಂಸರು ದೂರದೇಶಗಳಿಂದ ಬಂದು ಮೈಳೂರಿನಲ್ಲಿ ಕುಳಿತು ಉಸ್ಮಾನಖಾನನ ಕೈಯಲ್ಲೇ ತಬಲ ಡಗ್ಗ ಮಾಡಿಸಿಕೊಂಡು ಹೋಗುತ್ತಿದ್ದರು. ಅವನಿಂದ ಮೈಳೂರು ಜನ ಅನಾಯಾಸವಾಗಿ ದೊಡ್ಡ ದೊಡ್ಡ ವಿದ್ವಾಂಸರ ಸಂಗೀತ ಕೇಳುವ ಅವಕಾಶ ಲಭಿಸುತ್ತಿತ್ತು.

ಖಾನನ ವಾದಕ್ಕೆ ಇಂಥ ಖ್ಯಾತಿ ವಿನಾಕಾರಣ ಬಂದಿರಲಿಲ್ಲ. ಸ್ವಯಂ ಖಾನ ಉತ್ತಮ ತಬಲ್‌ಜೀಯಾಗಿದ್ದ. ಅವನ ತಾರುಣ್ಯದಲ್ಲಿ ರಹಮತ್

ಜಾನ್, ಹದ್ದೂ ಹಸೂಖಾನ್, ಬರ್ಕತ್ ಆಲಿ ಮೊದಲಾದ ವಿದ್ವಾಂಸರಿಗೆ ನುಡಿಸುತ್ತಿದ್ದ. ಅಹಮದ್‌ಜಾನ್ ತಿರೂಕವಾನ ಜತೆ ಸ್ಪರ್ಧೆ ಹೂಡಿ 'ಭಲೆ' ಎನಿಸಿಕೊಂಡಿದ್ದ.

ವಯಸ್ಸೂ ಆಯಿತು. ತೋಳಬಲವೂ ಕಡಿಮೆಯಾಯಿತು. ಖಾನ ತಬಲ ನುಡಿಸುವುದನ್ನು ಬಿಟ್ಟ. ತಬಲ ಮಾಡುವುದಕ್ಕೆ ಮೊದಲಿಟ್ಟ. ಕೇವಲ ವ್ಯಾಪಾರ ದೃಷ್ಟಿಯಿಂದ ಅವನು ವಾದ್ಯವನ್ನು ರಚಿಸುತ್ತಿರಲಿಲ್ಲ ವಾದ್ದರಿಂದ ಅವುಗಳಲ್ಲಿ ವಿಶೇಷ ನುಡಿಗಟ್ಟು, ನಾದಮಾಧುರ್ಯ ತುಂಬಿರುತ್ತಿದ್ದವು. ಉಸ್ಮಾನಖಾನನ ವಾಧ್ಯ ಬಾಳಿಕೆ ಬರುವುದೆಂದು ಹೆಸರಾಗಿತ್ತು.

ವಂಶಪಾರಂಪರ್ಯವಾಗಿ ಬಂದ ವಿದ್ಯೆ ಅನ್ಯಾಯವಾಗಿ ಹೋಗಿಬಿಡುವುದಲ್ಲಾ ಎಂದು ಮಗ ಬಾದಶಹನಿಗೆ ಅಭ್ಯಾಸಮಾಡಿಸಿದ್ದ. ಬಾದಶಹ ತಂದೆಯ ನೈಪುಣ್ಯವನ್ನು ದೊರಕಿಸಿಕೊಳ್ಳದಿದ್ದರೂ ಉತ್ತಮ ತಬಲ್‌ಜೀ ಯೆಂದು ಅನಿಸಿಕೊಂಡಿದ್ದ. ಆದರೆ ಬಾದಶಹನ ಒಲವು ತಬಲಾ ವಾದನದ ಕಡೆಗಿರಲಿಲ್ಲ. ತಂದೆಯ ಜತೆ ಅವನೂ ವಾದ್ಯಗಳನ್ನು ರಚಿಸುತ್ತಿದ್ದ. ಆದಷ್ಟು ಹೆಚ್ಚು ಹೆಚ್ಚಾಗಿ ವಾದ್ಯಗಳನ್ನು ರಚಿಸಿ ತುಂಬ ಹಣಗಳಿಸಬೇಕೆಂದು ಅವನ ಆಕಾಂಕ್ಷೆ.

ಈ ವೈಶ್ಯಮನೋವೃತ್ತಿಯನ್ನು ಕಂಡು ಮುದುಕ ನೊಂದುಕೊಳ್ಳುತ್ತಿದ್ದ. ಮನುಷ್ಯನಿಗೆ ಭಗವಂತ ಕರುಣಿಸುವ ದೊಡ್ಡ ವರ ಬಡತನವೆಂದು ಅವನ ಭಾವನೆ. ಪರಮಗುರು ಪೈಗಂಬರ ಮಹಮ್ಮದ್ದರ ಜೀವನ ವೃತ್ತಾಂತ ವನ್ನೆತ್ತಿಕೊಂಡು 'ಸೈತಾನನ ಕಡೆಗೆ ಮನಸ್ಸು ಕೊಡಬೇಡ. ಹಣಕ್ಕೆ ಬಾಯಿ ಬಿಡಬೇಕು. ತೃಪ್ತಿಗಿಂತಲೂ ದೊಡ್ಡ ಸಂಪತ್ತಿಲ್ಲ' ಎಂದು ಮಗನಿಗೆ ಬೋಧಿಸುತ್ತಿದ್ದ. ಬಾದಶಹ ಮುದುಕನ ಮಾತನ್ನು ಕೇಳಿದಂತೆ ನಟಿಸಿ ನಕ್ಕು ಸುಮ್ಮನಾಗುತ್ತಿದ್ದ.

ಉಸ್ಮಾನ್ ತಬಲಾಬಾರಿಸುವುದಕ್ಕೆ ವಯಸ್ಸೊಂದೇ ಕಾರಣವಾಗಿರಲಿಲ್ಲ. ಅವನ ಕೈ ನಡುಗುತ್ತಿತ್ತು ನಿಜ – ಆದರೆ ತಬಲಾದ ಮೇಲೆ ಒಂದು ಠೇಕಹಾಕಿ ಮುದುಕ ಕುಳಿತರಾಯಿತು. ವಯಸ್ಸು ಮರೆತು ಹೋಗುತ್ತಿತ್ತು. ಹೊಸ ಹುರುಪು ಬರುತ್ತಿತ್ತು. ತರುಣರನ್ನು ನಾಚಿಸುವಂತೆ ನುಡಿಸುತ್ತಿದ್ದ. ಆದರೆ ತಬಲ ಮುಟ್ಟಬೇಕೆಂದರೆ ಅವನ ಕರುಳು

ಕತ್ತರಿಸುತ್ತಿತ್ತು. ತಾನು ರಚಿಸುತ್ತಿದ್ದ ತಬಲಾಗಳನ್ನು ಪರೀಕ್ಷಿಸುವಾಗ ಒಮ್ಮೊಮ್ಮೆ ಉಸ್ಮಾನ್ ನುಡಿಸುತ್ತಿದ್ದ. ಅದರಾಗಲೂ ಜಪ್‌ತಾಳ ನುಡಿಸುತ್ತಿರಲಿಲ್ಲ. ಜಪ್‌ತಾಳವನ್ನು ಉಸ್ಮಾನ್ ತನ್ನ ಹೃದಯದಧಿದೇವತೆ ಅಮಿನಾಗೆ ಮೀಸಲು ಮಾಡಿದ್ದ.

ಅಮಿನಾ ಉಸ್ಮಾನರ ನಿಕಾ ಆದಾಗ ಅವನು ಕಡುಬಡವ. ಅವಳೂ ತೀರ ಬಡವರ ಮನೆಯ ಹೆಣ್ಣು. ಅವರ ದಾಂಪತ್ಯ ನಲವತ್ತು ವರ್ಷಕಾಲ ಅವಿಚ್ಛಿನ್ನವಾಗಿ ಸಾಗಿತು. ಅಮಿನಾ ಕೈಹಿಡಿದ ಮೇಲೆ ಉಸ್ಮಾನನ ಅದೃಷ್ಟದ ಬಾಗಿಲೂ ತೆರೆಯಿತು. ಮೇಲಿಂದ ಮೇಲೆ ಉತ್ತರ ಹಿಂದೂಸ್ಥಾನಕ್ಕೆ ಬೈಠಕ್ಕುಗಳಿಗೆ ಹೋಗಿ ಬರಲಾರಂಭಿಸಿದ. ಕೈಯಲ್ಲಿ ನಾಲ್ಕುಕಾಸು ಓಡಿಯಾಡುವಂತಾಯಿತು. ಆದರೆ ಎಲ್ಲೇ ಇರಲಿ ಈದ್ ಕಾಲಕ್ಕೆ ಉಸ್ಮಾನ್ ಮನೆಗೋಡಿಬರುತ್ತಿದ್ದ. ಅಮಿನಾ ಜತೆ ನಿಂತು ಈದ್ ಚಂದ್ರನ ದರ್ಶನಮಾಡಿ, ಅವಳ ಜತೆಯಲ್ಲಿ ನಮಾಜ್‌ಮಾಡಿದ ಹೊರತೂ ಅವನ ಆತ್ಮಕ್ಕೆ ಶಾಂತಿಯಿರುತ್ತಿರಲಿಲ್ಲ. ಉಸ್ಮಾನ್ ಕುಳಿತು ಜಪ್‌ತಾಳದಲ್ಲಿ ತಬಲಾ ನುಡಿಸಿದ ಹೊರತೂ ಅಂದಿನ 'ಈದ್' ಹಬ್ಬ ಪೂರ್ಣವಾಗುತ್ತಿರಲಿಲ್ಲ.

ಆ ನಲವತ್ತು ದಿವ್ಯ ವರ್ಷಗಳ ನೆನಸು ಉಸ್ಮಾನನಿಗೆ ಪದೇಪದೇ ಬರುತ್ತಿತ್ತು. ದಿನ–ಎರಡು ದಿನಕ್ಕೊಮ್ಮೆಯಾದರೂ ಖಬರಸ್ಥಾನಕ್ಕೆ ಹೋಗಿ ಅಮಿನಾ ಸಮಾಧಿಯ ಬಳಿ ನಮಾಜಿನ ಜಮಖಾನಾ ಹಾಸಿದ ಹೊರತೂ ಅವನಿಗೆ ತೃಪ್ತಿಯಿಲ್ಲ. ಹೋದಾಗಲೆಲ್ಲಾ ತನ್ನ ಒಬ್ಬನೇ ಮಗ ಬಾದಶಹನ ವಿಷಯ ವರದಿ ಒಪ್ಪಿಸಿ ಬರುತ್ತಿದ್ದ. ಉಸ್ಮಾನನ ದೃಷ್ಟಿಯಲ್ಲಿ ಅಮಿನಾ– ಅಲ್ಲಿ–ಖಬರಸ್ಥಾನದಲ್ಲಿ ತಾಯಿ ತೊಡೆಯ ಮೇಲೆ ಮಲಗಿದ್ದಳು. ಪ್ರಭುವಿನ ಮುಂದೆ ಹೋಗಿ ನಿಂತು ಅಪರಾಧಗಳನ್ನೊಪ್ಪಿ ಕೊಳ್ಳಲು ತನಗಾಗಿ ಕಾಯುತ್ತಿದ್ದಳು. ಅಪರಾಧ ಎಲ್ಲಿ ಮಾಡಿದ್ದಳು? ತಾನು ಅಪರಾಧಿ. ಅಮಿನೆಯನ್ನು ಚಳಿಗಾಲದಲ್ಲಿ ಬಟ್ಟಬಯಲಿನಲ್ಲಿ ಮಲಗಿಸಿ ತಾನು ಮನೆಯಲ್ಲಿ ಬೆಚ್ಚಗೆ ಮಲಗಿ ನಿದ್ರಿಸುವ ಅಪರಾಧಿ.

ಅಮಿನಾ ಹೋದ ಮೇಲೆ ಮಗನನ್ನು ಬೆಳಸಿ ದೊಡ್ಡವನನ್ನಾಗಿ ಮಾಡುವ ಪೂರ್ಣ ಜವಾಬ್ದಾರಿ ಉಸ್ಮಾನನ ಹೆಗಲ ಮೇಲೆ ಬಿತ್ತು.

ಅವನು ವಯಸ್ಸಿಗೆ ಬಂದ ಮೇಲೆ ನಿಕಾ ಮಾಡಿಸಿದ್ದ. ಸೊಸೆ ತಂದೆ ಮಕ್ಕಳಿಬ್ಬರಿಗೂ ಅನ್ನ ಕಾಣಿಸುತ್ತಿದ್ದಳು.

ವೈಳೂರಿನಲ್ಲಿ ಮುಸಲ್ಮಾನರ ನೂರಾರು ಮನೆಗಳಿದ್ದವು – ಆದರೆ ಹಿಂದುಗಳೇ ಅಧಿಕ ಸಂಖ್ಯಾತರು. ಒಂದು ಕಡೆ ಜುಮ್ಮಾ ಮಸೀದಿ – ಇನ್ನೊಂದು ಕಡೆ ಗೋಪಾಲಕೃಷ್ಣದೇವರ ದೇವಾಲಯ. ಹಿಂದೂ ಮುಸಲ್ಮಾನರಿಬ್ಬರೂ ಬಹಳ ದಿವಸಗಳಿಂದ ಅಣ್ಣ ತಮ್ಮಂದಿರಂತೆ ಬಾಳುವೆ ಮಾಡಿಕೊಂಡು ಬಂದಿದ್ದರು. ಮೊಹರಂ ಹಬ್ಬದಲ್ಲಿ ಹಿಂದುಗಳು ವೇಷ ಹಾಕಿ ಮುಸಲ್ಮಾನರೊಂದಿಗೆ ಹಬ್ಬವನ್ನಾಚರಿಸುತ್ತಿದ್ದರು. ಹೋಳಿ ಹುಣ್ಣಿಮೆ ದಿನ ಮುಸಲ್ಮಾನರು ವೇಷ ಹಾಕುತ್ತಿದ್ದರು, ಲಾವಣಿ ಹಾಡುತ್ತಿದ್ದರು.

ಮನೆಯಲ್ಲಿ ರೋಗರುಜಿನಾದಿಗಳು ತಲೆದೋರಿದರೆ ಹಿಂದುಗಳು ಜುಮ್ಮಾಮಸೀದಿಗೆ ಹೋಗಿ ಪೀರನ ಕಡೆಯಿಂದ ಬೂದಿ ಹಚ್ಚಿಸಿಕೊಳ್ಳು ತ್ತಿದ್ದರು. ಮುಸಲ್ಮಾನರು ಎಲ್ಲಮ್ಮನ ಗುಡ್ಡಕ್ಕೆ ಹರಕೆಹೋಗುತ್ತಿದ್ದರು. ಶುಭಶೋಭನಾದಿಗಳಲ್ಲಿ ಇಬ್ಬರು ಕಲೆತು, ಬೆರೆತು ನಕ್ಕು ನಲಿಯು ತ್ತಿದ್ದರು. ದೇವಸ್ಥಾನದ ಬಯಲಿನಲ್ಲಿ ಏರ್ಪಾಟಾಗುತ್ತಿದ್ದ ಕೀರ್ತನೆಗಳಿಗೆ ಹಿಂದುಗಳಷ್ಟೇ ಮುಸಲ್ಮಾನರೂ ಬರುತ್ತಿದ್ದರು.

ಶೃಂಗೇರಿ ಜಗದ್ಗುರುಗಳೊಮ್ಮೆ ವೈಳೂರಿಗೆ ಆಗಮಿಸಿದಾಗ ಮುಸ್ಲಿಂ ಮುಖಂಡರು ಅವರನ್ನು ಕಂಡು, ಮರ್ಯಾದೆಯಿಂದ ಬರಮಾಡಿ ಕೊಂಡು ಪಾದಪೂಜೆ ಸಲ್ಲಿಸಿ ೧೦೦೧ ರೂಪಾಯಿಗಳ ಕಾಣಿಕೆಯಿತ್ತರು. ಮುಸ್ಲಿಮರ ಲಂಗರಖಾನಾ, ಅನಾಥಲಯ, ಹಾಜ್ ನಿಧಿಗಳಿಗೆ ಹಿಂದು ಗಳು ಉದಾರಹೃದಯದಿಂದ ಹಣಕೊಡುತ್ತಿದ್ದರು. ಸಹಪಂಕ್ತಿ ಭೋಜನ, ವಿವಾಹ ಸಂಬಂಧ ಎರಡನ್ನುಳಿದು ಹಿಂದೂ ಮುಸಲ್ಮಾನರಿಗೆ ಭೇದವೇ ಇರಲಿಲ್ಲ. ಮುಸ್ಲಿಮರ ಮನೆಯ ಮುಂದೆ ಬೆಳಿಗ್ಗೆ ಲಕ್ಷಣವಾಗಿ ಸಾರಿಸಿ ರಂಗವಲ್ಲಿ ಇಟ್ಟಿರುತ್ತಿದ್ದುದನ್ನು ಕಂಡು ಹೊರಗಿನವರು ಆಶ್ಚರ್ಯ ಪಡುತ್ತಿದ್ದರು.

ಪಟೇಲ್ ಭೀಮಪ್ಪ, ಶಾನುಭೋಗ್ ಕೃಷ್ಣಮೂರ್ತಿ, ಪುರೋಹಿತ ವೆಂಕಣ್ಣದಾಸ, ನಗರ್ತರ ಸಿದ್ದಪ್ಪ, ದೊಡ್ಡಂಗಡಿ ಲಚ್ಚಪ್ಪಶೆಟ್ಟಿ, ಬೀಡಿ

ದುಕಾನ್ ಕರೀಮು, ಟಾಂಗಾ ಸತ್ತಾರ್ ಇವರೆಲ್ಲ ಉಸ್ಮಾನನ ಜೀವನದೊಂದಿಗೆ ಹಾಸುಹೊಕ್ಕಾಗಿದ್ದರು. ಪರವೂರಿಗೆ ಉಸ್ಮಾನ್ ಪ್ರಯಾಣ ಬೆಳೆಸಬೇಕಾದರೆ ಪುರೋಹಿತರು ವಾರ, ದಿಕ್ಕು ನಕ್ಷತ್ರ ಹೇಳಬೇಕು. ಉಸ್ಮಾನನಿಗೆ ಕೈಸಾಲ ಬೇಕಾದರೆ ಲಚ್ಚಪ್ಪಶೆಟ್ಟಿ ಕೊಡಬೇಕು. ಮನೆಗೆ ಒಂದು ಹೊರೆ ಹುಲ್ಲು ಬೇಕಾದರೆ ಭೀಮಪ್ಪ ಕಳುಹಿಸಬೇಕು. ಹೊರಗಿನಿಂದ ಯಾರಾದರೂ ವಿದ್ವಾಂಸರು ಬಂದಾಗ ಊರಿನ ಗೆಳೆಯರನ್ನೆಲ್ಲಾ ಬರಮಾಡಿಕೊಂಡು ಹಾಲುಹಣ್ಣಿನ ಫಲಹಾರ ನೀಡಿ ಉಸ್ಮಾನ್ 'ದಾವತ್' ಮಾಡಿಸುತ್ತಿದ್ದ.

ಒಂದು ಸಲ ಪಟೇಲನ ಮಗಳು ಚೆನ್ನಕ್ಕನ ಲಗ್ನ ನಿಶ್ಚಯವಾಯಿತು. ಚೆನ್ನಕ್ಕನನ್ನು ಉಸ್ಮಾನ್ ಎತ್ತಿ ಆಡಿಸಿ ಬೆಳಸಿದ್ದ. ಖಾನಪ್ಪ ಬಂದ ಹೊರತು ತಾನು ಹಸೆಮಣೆಯ ಮೇಲೆ ಬರುವುದಿಲ್ಲವೆಂದು ಚನ್ನಕ್ಕ ಹಟ ಹಿಡಿದಳು. ಕೊನೆಗೂ ಖಾನಪ್ಪನೇ ಬಂದು ಅವಳನ್ನು ಹಸೆಮಣೆಯ ಮೇಲೆ ಕರೆದು ತರಬೇಕಾಯಿತು.

ಲಗ್ನ ಮುಗಿದ ಮೇಲೆ ಬೀಗರ ಜತೆ ಮಗಳನ್ನು ಕಳುಹಿಸಿಕೊಡಬೇಕಾಯಿತು. ಚೆನ್ನ ಎಲ್ಲ ಹಿರಿಯರಿಗೂ ನಮಸ್ಕಾರಮಾಡಿ ಖಾನಪ್ಪನಿಗೂ ನಮಸ್ಕಾರ ಮಾಡಿದಳು. ಅವನು ಮಗುವಿನಂತೆ ಅಳುವುದಕ್ಕೆ ಮೊದಲುಮಾಡಿದ. ಅಳಿಯನ ಕೈಹಿಡಿದು 'ನಮ್ದು ಮಗು – ಚೆಂದಾಕೆ ನೋಡ್ಕೋಪ್ಪ' ಎಂದ. ಭೀಮಪ್ಪನನ್ನು ಸಂತೈಸುವುದಕ್ಕಿಂತಲೂ ಹೆಚ್ಚಾಗಿ ಎಲ್ಲರೂ ಖಾನಪ್ಪನನ್ನು ಸಂತೈಸಬೇಕಾಯಿತು.

ಜುಮ್ಮಾಮಸೀದಿಯ ಪೀರಸಾಹೇಬರು ತೀರಿಕೊಂಡರು. ಹಿಂದೂ ಮುಸಲ್ಮಾನರು ಕೂಡಿ ಅವರ ಸಮಾಧಿ ಸಂಸ್ಕಾರವನ್ನು ಭಕ್ತಿಯಿಂದ ನೆರವೇರಿಸಿದರು. ಅವರ ಸ್ಥಾನಕ್ಕೆ ಹೈದರಾಬಾದಿನಿಂದ ಒಬ್ಬ ಪೀರಸಾಹೇಬರು ಬರುತ್ತಾರೆಂದು ತಿಳಿದುಬಂತು. 'ಹೊರಗಿನಿಂದ ಏತಕ್ಕೆ ತರಬೇಕು – ಊರಿನಲ್ಲಿಯೇ ಯಾರನ್ನಾದರೂ ನಿಯಮಿಸಬಹುದಾಗಿತ್ತಲ್ಲಾ' ಎಂದು ಖಾನಪ್ಪ ಮರುಗಿದ. ಆದರೆ ಕೆಲಸ ಕೈಮಿಾರಿ ಹೋಗಿತ್ತು. ಹೊಸ ಪೀರಸಾಹೇಬರು ಹೈದರಾಬಾದಿನಿಂದ ಪ್ರಯಾಣ ಬೆಳಸಿದ್ದರು.

ಹಳೆಯ ಪೀರ ಸಾಹೇಬರಿಗೂ ಊರಿನವರಿಗೂ ಇದ್ದ ಸ್ನೇಹ ಹೊಸ ಪೀರ ಸಾಹೇಬರ ಬಗ್ಗೆ ಬೆಳೆಯಲಿಲ್ಲ. ಹೊಸ ಪೀರ ಸಾಹೇಬರು ಹೆಚ್ಚಾಗಿ ಜನಗಳ ಜತೆ ಸಲಿಗೆಯಿಂದ ವರ್ತಿಸುತ್ತಿರಲಿಲ್ಲ. ಹಿಂದುಗಳ ಜತೆ ಸಂಪರ್ಕವಿಟ್ಟುಕೊಳ್ಳುವುದು ಅವರಿಗೆ ತೀರ ಅಸಹ್ಯದ ಕೆಲಸವಾಗಿತ್ತು.

ಉಸ್ಮಾನ್ ಕ್ರಮವಾಗಿ ಮಸೀದಿಗೆ ಜುಮ್ಮಾಗೆ ಹೋಗಿಬರುತ್ತಿದ್ದ. ಆದರೆ ಅವನಿಗೂ ಪೀರ ಸಾಹೇಬರಿಗೂ ನಿಕಟ ಬಾಂಧವ್ಯ ಬೆಳೆಯಲಿಲ್ಲ. ಪೀರ ಸಾಹೇಬರು ಬಾದಶಹನ ವಿಶ್ವಾಸಿಗಳಾಗಿದ್ದರು. ಬಾದಶಹ ತಂದೆಯ ಬಲವಂತಕ್ಕೆ ಮಸೀದಿಗೆ ಹೋಗುತ್ತಿದ್ದವನು ಹೊಸ ಪೀರರು ಬಂದ ಮೇಲೆ ತಂದೆಗಿಂತಲೂ ಹೆಚ್ಚಾಗಿ ಮಸೀದಿಗೆ ಹೋಗಿ ಬರುತ್ತಿದ್ದ. ಮೆಲ್ಲಗೆ ಗಡ್ಡ ಬೆಳಸಲು ತೊಡಗಿದ್ದ. 'ಹೋಗಿ ಬರಲಿ' ಎಂದುಕೊಂಡು, ಆ ಪ್ರಸ್ತಾಪವನ್ನು ಮಾಡುವ ಗೋಜಿಗೆ ಉಸ್ಮಾನ್ ಬೀಳಲಿಲ್ಲ.

ಊರಿನಲ್ಲಿ ಕಾಮನ ಹಬ್ಬದ ಸಿದ್ಧತೆ ನಡೆದಿತ್ತು. ಸಂಪ್ರದಾಯದಂತೆ ದೊಡ್ಡ ಪೇಟೆಗಳಲ್ಲೆಲ್ಲಾ ಸ್ಪರ್ಧೆಯಿಂದ ಕಾಮನನ್ನು ಕೂಡಿಸುತ್ತಿದ್ದರು. ಕಾಮನಿಗೆ ಕಿನ್‌ಕಾಪಿನ ಅಂಗಿ ಟೋಪಿಗಳನ್ನು ಮುಸಲ್ಮಾನರು ಕೌಶಲ್ಯದಿಂದ ಹೊಲೆದು ಕೊಡುತ್ತಿದ್ದರು. ಕಾಮನ ಹಬ್ಬಕ್ಕೆ ೧೫ ದಿವಸಕ್ಕೆ ಮುಂಚೆ ರಾತ್ರಿ ಹನ್ನೊಂದು ಗಂಟೆಗೆ ಮಸೀದಿಯಲ್ಲಿ ಊರಿನ ಮುಸಲ್ಮಾನರ ಒಂದು ಸಭೆಯನ್ನು ಪೀರ್ ಸಾಹೇಬರು ಕರೆದರು. ಮೊದಲೇ ಒಂದು ರೀತಿಯಲ್ಲಿರುವ ಪೀರ್ ಸಾಹೇಬರು ಸಭೆಗೆ ತಾನು ಹೋಗದಿದ್ದರೆ ಮತ್ತಷ್ಟು ಕೋಪಕೊಂಡಾರೆಂದು ಉಸ್ಮಾನನೂ ಬಾದಶಹನೊಂದಿಗೆ ಹೊರಟ.

ಪೀರ್ ಸಾಹೇಬರು ದೊಡ್ಡ ಭಾಷಣವನ್ನೇ ಮಾಡಿ ಕೊನೆಯಲ್ಲಿ 'ಇನ್ನು ಮೇಲೆ ಕಾಮನ ಹಬ್ಬದಲ್ಲಿ ಮುಸಲ್ಮಾನರು ಯಾರೂ ಸೇರಕೂಡದು. ವೇಷ ಹಾಕುವುದು, ಹಾಡು ಹೇಳುವುದು ಎಲ್ಲಾ ಇಸ್ಲಾಮಿನಲ್ಲಿ ಖರಾಬ್. ಹಿಂದುಗಳ ಹಬ್ಬದಲ್ಲಿ ಮುಸಲ್ಮಾನರು ಭಾಗ ವಹಿಸುವುದು ನಾಚಿಕೆಗೇಡು' ಎಂದರು. ನೆರೆದಿದ್ದ ಮುಸಲ್ಮಾನ ಮುಖಂಡರಲ್ಲಿ ಮೃತ್ಯು ಶಾಂತಿ ಹಬ್ಬಿತು. ಪೀರರ ಮಾತಿಗೆ ಎದುರು ಹೇಳುವ ಧೈರ್ಯ ಯಾರಿಗೂ ಆಗದು. ಆದರೆ ಪೀರರ ವಾದವೈಖರಿ ಬಹಳ ಮಂದಿಗೆ ಹಿಡಿಸಲಿಲ್ಲ. ಎಲ್ಲರೂ ಉಸ್ಮಾನನ ಕಡೆ ನೋಡಿದರು. ಉಸ್ಮಾನ್ ಎದ್ದು ನಿಂತು

" ಪೀರ್ ಸಾಹೇಬರೇ "

ಎಂದ. ಪಕ್ಕದಲ್ಲಿದ್ದ ಬಾದಶಹ ತಂದೆಯನ್ನು ಕೂಡಿಸಲೆತ್ನಿಸಿದ. ಆದರೆ ಉಸ್ಮಾನ್ ಅವನಿಗೆ ದಕ್ಕಲಿಲ್ಲ.

" ಏನು ಉಸ್ಮಾನ್ ಖಾನ್? "

" ಇದುವರೆಗೆ ಹಿಂದೂ ಜನ ಮೊಹರಮ್ಮಿನಲ್ಲಿ ವೇಷ ಹಾಕುತ್ತಾ ಬಂದಿದ್ದಾರೆ. ನಾವು ಹೋಳಿ ಹಬ್ಬದಲ್ಲಿ ಅವರ ಜತೆ ವೇಷ ಹಾಕುತ್ತಾ ಬಂದಿದ್ದೇವೆ. ಇಬ್ಬರು ಅಣ್ಣತಮ್ಮಂದಿರ ಹಾಗಿದ್ದೇವೆ. "

" ಮುಸಲ್ಮಾನನಿಗೆ ಮುಸಲ್ಮಾನ ಮಾತ್ರ ಅಣ್ಣ ತಮ್ಮ. ಕಾಫಿರರು ಯಾರೂ ಅಣ್ಣತಮ್ಮ ಆಗುವುದು ಸಾಧ್ಯವಿಲ್ಲ.

" ನೀವು ಇಲ್ಲಿಗೆ ಹೊಸಬರು ಪೀರ್ ಸಾಹೇಬರೇ. ಇಲ್ಲಿನ ವಿದ್ಯಮಾನ ನಿಮಗೆ ಚೆನ್ನಾಗಿ ಗೊತ್ತಿಲ್ಲ. "

" ಚೆನ್ನಾಗಿ ಗೊತ್ತಿದೆ ಉಸ್ಮಾನ್ ಖಾನ್. "

" ಗೊತ್ತಿದ್ದರೆ ಹೋಳೀ ಹಬ್ಬದಲ್ಲಿ ನಾವು ಸೇರಬಾರದೆಂದು ನೀವು ವಿಧಿಸುತ್ತಿರಲಿಲ್ಲ. "

" ನಾವು ಇಲ್ಲಿ ಬಂದಿರುವುದು ಇಸ್ಲಾಮಿನ ಸೇವೆ ಮಾಡುವುದಕ್ಕೆ – ಕಾಫಿರರ ಸೇವೆ ಮಾಡುವುದಕ್ಕಲ್ಲ."

" ನೀವು ಬಂದಿರುವುದು ದೇವರ ಸೇವೆ ಮಾಡುವುದಕ್ಕೆ. "

" ಇಸ್ಲಾಮೇ ದೇವರು. "

" ನಿಜ. ಆದರೆ ಇಸ್ಲಾಂ ನೆರೆಹೊರೆಯವರಲ್ಲಿ ಜಗಳ ಅಪೇಕ್ಷಿಸುವುದಿಲ್ಲ. ಇದರಿಂದ ಒಳ್ಳೆಯದಾಗುವುದಿಲ್ಲ."

" ಏನಾಗುತ್ತೆ? "

" ಹಿಂದುಗಳು ನಮಗೆ ಬಹಿಷ್ಕಾರ ಹಾಕುತ್ತಾರೆ. ಮೊಹರಂ ಹಬ್ಬದಲ್ಲಿ ಅವರು ಭಾಗವಹಿಸುವುದಿಲ್ಲ. "

" ಒಳ್ಳೆಯದೇ ಆಯಿತು. ಮೊಹರಂ ಮಜಾ ಮಾಡುವ ಹಬ್ಬವಲ್ಲ. ಅದು ದುಃಖಪ್ರದರ್ಶನಮಾಡುವ ಪವಿತ್ರ ದಿನ. "

" ನೀವು ಇಲ್ಲದ ವ್ಯಾಜ್ಯ ಹಚ್ಚುತ್ತಿರುವಿರಿ. "

" ಸಾಕು ಬಾಯಿ ಮುಚ್ಚು ಉಸ್ಮಾನ್ ಖಾನ್. "

" ನಾನು ಬಾಯಿ ಮುಚ್ಚುವುದಿಲ್ಲ. ಇಸ್ಲಾಮಿನ ಹೆಸರಿನಲ್ಲಿ ಆಗುವ ಅತ್ಯಾಚಾರ ನೋಡಿ ಸಹಿಸಲಾರೆ. ನೀವು ನಿಮ್ಮ ಆಜ್ಞೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು."

" ಸಾಧ್ಯವಿಲ್ಲ. ಈ ಸೈತಾನೀ ಷಹರ್ ಇನ್ನಾದರೂ ಇಸ್ಲಾಂ ನಗರವಾಗಬೇಕು—ಈ ಮುದಿ ಹುಚ್ಚನನ್ನು ಆಚೆಗೆ ಕಳುಹಿಸಿ."

ಎಂದ ಪೀರ್ ಸಾಹೇಬರು ಚೀತ್ಕರಿಸಿದರು.

ಕುಳಿತಿದ್ದವರು ಯಾರೂ ಏಳಲಿಲ್ಲ. ತಮ್ಮ ಆಜ್ಞೆಗೆ ಸಿಕ್ಕಿದ ಮರ್ಯಾದೆಯನ್ನು ಕಂಡು ಪೀರ್ ಸಾಹೇಬರು ದಿಗ್ಭ್ರಾಂತರಾದರು.

" ಸರಿ. ಮಸೀದಿಯಲ್ಲಿ ನೀವೇ ಇರಿ – ನಾನೇ ಹೋಗುತ್ತೇನೆ"

ಎಂದರು. ಉಸ್ಮಾನ್

" ಬೇಡಿ – ನಿಲ್ಲಿ – ನಾನೇ ಹೊರಡುತ್ತೇನೆ. ಆದರೆ ನನ್ನ ಕೊನೆಯ ಪ್ರಾರ್ಥನೆ ಕೇಳಿಕೊಂಡು ಬಿಡಿ. ನೀವು ಹೋಳೀ ಹಬ್ಬ ಬಿಟ್ಟರೋ ಹಿಂದುಗಳ ದ್ವೇಷ ಕಟ್ಟಿಕೊಂಡಂತೆ. ನಮ್ಮಲ್ಲಿ ಬಹುಮಂದಿ ಅವರ ಆಶ್ರಯದಲ್ಲಿದ್ದೇವೆ. ನಮ್ಮನ್ನು ಪ್ರೀತಿಯಿಂದ ಅವರು ಇದುವರೆಗೆ ನಡೆಸಿಕೊಂಡು ಬಂದಿದ್ದಾರೆ. ಈಗ ದುಡುಕಿದರೆ 'ಕುಂಬಾರನಿಗೆ ವರ್ಷ ದೊಣ್ಣೆಗೆ ನಿಮಿಷ 'ವಾಗತ್ತೆ"

ಎಂದು ಹೊರಟುಬಿಟ್ಟ. ಬಾದಶಹ ಅವನನ್ನು ಹಿಂಬಾಲಿಸಲಿಲ್ಲ. ಅಮೀನಾ ಶಾಂತಿಸ್ಥಾನದ ಬಳಿಗೆ ಉಸ್ಮಾನನನ್ನು ಅವನ ಕಾಲುಗಳೆಳೆದೊಯ್ದುವು.

" ಬೀಗಂ – ಕೇಳಿದೆಯಾ? "

ಸಮಾಧಿಯಿಂದ ಒಂದು ಕೋಮಲ ಸ್ತ್ರೀಕಂಠ ಉತ್ತರಿಸಿತು.

" ಕೇಳಿದೆ ಸಾಬ್."

" ಇದರಿಂದ ಯಾರಿಗೆ ಒಳ್ಳೆಯದು ಆಗುತ್ತೆ? "

" ಪೀರ್ ಸಾಹೇಬರು ದ್ವೇಷದ ಬೀಜ ಬಿತ್ತುತ್ತಿದ್ದಾರೆ."

" ಬಾದಶಹ ಅವನಂತೆಯೇ ಆಗಿಬಿಟ್ಟಿದ್ದಾನಲ್ಲಾ ಬೀಗಂ."

" ನಮ್ಮ ದುರದೃಷ್ಟ."

" ಬೀಗಂ, ಇನ್ನು ಹೆಚ್ಚು ದಿನ ನಾನಿನ್ನು ಬದುಕಿರಲಾರೆ. ನನ್ನನ್ನು ಬೇಗ ಬರಮಾಡಿಕೊಳ್ಳಲಾರೆಯಾ? "

" ಸಾಬ್ – ನಾನು ನಿಮಿಷ ನಿಮಿಷವನ್ನೂ ಎಣಿಸುತ್ತಿದ್ದೇನೆ. ಆದರೆ ನೀವು ಈಗ ಬರಬೇಡಿ. ಅಲ್ಲೇ ನಾಲ್ಕು ದಿನ ನಿಲ್ಲಿ. ಪೀರ್ ಸಾಹೇಬನ ಪಿತ್ಥಕ್ಕೆ ಚಿಕಿತ್ಸೆ ಮಾಡುವವರು ಯಾರೂ ಇಲ್ಲ. ನೀವು ಅಲ್ಲೇ ಇದ್ದು ಶಾಂತಿ ಸ್ಥಾಪನೆ ಮಾಡಬೇಕೆಂದು ಅಲ್ಲಾನ ಹುಕುಂ."

" ಬಿಸಮಿಲ್ಲಾಹ್ – ಹಿರ್ರಹ್‌ಮಾ. ನಿರ್ರಹೀಮ್. "

ಎಂದು ಉಸ್ಮಾನ್ ಮನೆಯ ಕಡೆ ಹೊರಟ.

ಉಸ್ಮಾನ್ ಮನೆ ತಲುಪಿದಾಗ ಬಾದಶಹ ಇನ್ನೂ ಬಂದಿರಲಿಲ್ಲ. ಉಸ್ಮಾನನಿಗೆ ತುಂಬ ಆಯಾಸವಾಗಿತ್ತು. ಅಲ್ಲಾನ ಹೆಸರು ಜಪಿಸುತ್ತ ಮಲಗಿದ. ಆ ನಿರ್ಮಲ ಜೀವಕ್ಕೆ ನಿದ್ದೆಬರುವುದು ತಡವಾಗಲಿಲ್ಲ.

ಬೆಳಿಗ್ಗೆ ಎದ್ದಕೂಡಲೆ ತಂದೆ, ಮಗ ಒಟ್ಟಿಗೆ ಚಹಾ ತೆಗೆದುಕೊಂಡು ಅಂಗಡಿಗೆ ಹೋಗುತ್ತಿದ್ದುದು ರೂಢಿ. ಉಸ್ಮಾನ್ ಏಳುವ ಹೊತ್ತಿಗೆ ಬಾದಶಹ ಹೊರಟೇಹೋಗಿದ್ದ. ಉಸ್ಮಾನ್ ಸೊಸೆಯನ್ನು ಕೇಳಿದ.

" ಬಾಬಾ ಚಹ ತೆಗೆದುಕೊಂಡು ಹೋದನೇ ?"

" ತೆಗೆದುಕೊಂಡರು. "

" ರಾತ್ರಿ ಎಷ್ಟುಹೊತ್ತಿಗೆ ಬಂದ. "

" ಬಹಳ ಹೊತ್ತಾಗಿತ್ತು. ನೀವು ಬಂದ ಮೇಲೆ ಒಂದು ತಾಸಾಗಿರಬಹುದು. ರಾತ್ರಿ ಮಸೀದಿಯಲ್ಲಿ ಏನಾಯಿತು ? "

" ಬಾಬಾ ಹೇಳಲಿಲ್ಲವೇ ? "

" ಮಾತೇ ಆಡಲಿಲ್ಲ. ಅವರಿಗೇಕೋ ತುಂಬ ಕೋಪ."

" ರಾತ್ರಿ ನಿದ್ದೆ ಮಾಡಿದನೇ ? "

" ಕಣ್ಣೇ ಮುಚ್ಚಲಿಲ್ಲ. ಮಸೀದಿಯಲ್ಲೇನಾದರೂ ಜಗಳವಾಯಿತೇ ? "

" ಇಲ್ಲ. "

ಎಂದು ರಾತ್ರಿಯ ಕಥೆಯನ್ನು ಸಾದ್ಯಂತ ವರ್ಣಿಸಿದ. ಬಹೂರಾಣಿ ಆದನ್ನು ಕೇಳಿ ದುಃಖಿತೆಯಾದಳು.

“ ಈ ಸೈತಾನ್ ಪೀರ ಎಲ್ಲಿಂದ ಬಂದ ದಾದಾ. ”

“ ದೇವರ ಸೇವಕನನ್ನು ಹಾಗನ್ನಬಾರದು ಬಹೂ. ”

“ ತಂದೆಮಕ್ಕಳು ನಿಮ್ಮಲ್ಲಿ ಕಲಹವನ್ನೆಬ್ಬಿಸಿದ್ದಾನೆ. ”

“ ನನ್ನ ಮಗ ಜಾಣ. ಅವನು ಎಂದಿಗೂ ನನ್ನ ಜತೆ ಜಗಳ ಮಾಡುವುದಿಲ್ಲ.”

ದಾದನ ಮಾತು ಕೇಳಿ ಬಹೂರಾಣಿ ನಕ್ಕಳು. ಉಸ್ಮಾನ್ ಅಂಗಡಿ ಕಡೆ ಹೊರಟ.

ಅಂಗಡಿಯಲ್ಲಿಯೂ ತಂದೆ ಮಗನಿಗೆ ಮಾತೇ ಇಲ್ಲ. ತಂದೆ ಮಾತನಾಡಿಸಿದರೆ ‘ ಹೂ. ಉಹೂ ’ ಎಂದಷ್ಟೇ ಹೇಳಿ ಬಾದಶಹ ಸುಮ್ಮ ನಾಗುತ್ತಿದ್ದ.

ಮನೆಗೆ ಹಿಂದಿರುಗಿದ ಮೇಲೆ ಬಾದಶಹ ತಂದೆ ಜತೆ ಊಟಕ್ಕೆ ಕೂಡಲಿಲ್ಲ. ‘ ದೋಸ್ತ್ ಮನೆಯಲ್ಲಿ ದಾವತ್ ಇದೆ ’ ಎಂದು ಹೇಳಿ ಹೊರಟುಹೋದ. ಉಸ್ಮಾನ್ ಗಂಟಲಲ್ಲಿ ಅನ್ನ ಇಳಿಯಲಿಲ್ಲ. ಬಹೂರಾಣಿ ಕಣ್ಣಲ್ಲಿ ನೀರು ತಂದುಕೊಂಡಳು.

ರಾತ್ರಿ ಬಾದಶಹ ಮನೆಗೆ ಬಂದ ಮೇಲೆ ಬಹೂ ಅವನನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಂಡರು. ತಂದೆಯ ಕಾಲು ಹಿಡಿದುಕೊಂಡು ಅವನ ಕ್ಷಮೆಬೇಡಿ, ಊಟಕ್ಕೆಬ್ಬಿಸದಿದ್ದರೆ ತಾನು ತೌರುಮನೆಗೆ ಹೋಗಿಬಿಡುವು ದಾಗಿ ಹೆದರಿಸಿದಳು. ಬಾದಷಹ ಗಂಟುಮೋರೆ ಹಾಕಿಕೊಂಡು ಮಲಗಿದ್ದ ತಂದೆ ಬಳಿಗೆ ಬಂದ. ಮೆಲ್ಲನೆ ಮುಸುಕು ಜಗ್ಗಿ

“ದಾದಾ—ದಾದಾ.” ಎಂದ.

“ಏನು ಬಾಬಾ” ಎಂದು ಉಸ್ಮಾನ್ ಕೇಳಿದ. ಮುದುಕ ಅಳುತ್ತಿರು ವಂತೆ ಕಂಡಿತು.

“ ಮಾಫ್ ಮಾಡು ದಾದಾ ” ಎಂದು ಮುದುಕನ ಕಾಲು ಹಿಡಿದ. ಉಸ್ಮಾನ್ ಮಗನನ್ನು ಅಪ್ಪಿ ಮುದ್ದಿಟ್ಟ.

“ ಬಾಬಾ—ನನ್ನ ಮೇಲೆ ಕೋಪಮಾಡಿಕೊಳ್ಳಬೇಡ. ನಾನು ಹೆಚ್ಚುಕಾಲ ಬದುಕಿ ನಿಮಗೆಲ್ಲಾ ಹಿಂಸೆ ಕೊಡುವುದಿಲ್ಲ. ”

ಎಂದ. ಬಾದಷಹನ ರುದ್ರಶಕ್ತಿ ಕೂಡ ತಂದೆಯ ಕರುಳುವಚನಕ್ಕೆ ತಲೆಬಾಗಬೇಕಾಯಿತು.

ಪೀರಸಾಹೇಬನ ಸುಗ್ರೀವಾಜ್ಞೆಯನ್ನು ವಿರೋಧಿಸುವ ಎದೆಗಾರಿಕೆ ಯಾರಿಗೂ ಸಾಧ್ಯವಾಗಲಿಲ್ಲ. ಮುಸಲ್ಮಾನರು ಸಹಕರಿಸದಿದ್ದುದರಿಂದ ಹೋಳೀಹಬ್ಬ ನಿಲ್ಲಲಿಲ್ಲ. ಆದರೆ ಅದರಲ್ಲಿ ಯಾವ ಕಳೆಯೂ ಉಳಿದಿರಲಿಲ್ಲ. ವರ್ಷದ ಹಬ್ಬ ಮಾಡಬೇಕಲ್ಲಾ ಎಂದು ಬಲವಂತಕ್ಕೆ ಮಾಡಿದ ಹಾಗಿತ್ತು.

ಹಬ್ಬದ ದಿನ ಊರಿನ ನಾಲ್ಕುಜನ ಹಿರಿಯರು ಉಸ್ಮಾನಖಾನನನ್ನು ಕಾಣಲು ಬಂದರು. ಆ ಬೆಳಿಗ್ಗೆ 'ಮುಬಾರಕ್' ಹೇಳಲು ಉಸ್ಮಾನ್ ಮತ್ತಿತರು ಮುಸಲ್ಮಾನ ಮುಖಂಡರು ಹಿಂದುಗಳ ಮನೆಗೆ ಹೋಗುವುದು ವಾಡಿಕೆ. ಆ ವಾಡಿಕೆ ಮುರಿದು ಬಿದ್ದಿತ್ತು. ಭೀಮಪ್ಪ ಎಲ್ಲರನ್ನೂ ಕರೆದು ಕೊಂಡು ಖಾನಪ್ಪನನ್ನು ನೋಡಲು ಬಂದ.

ಉಸ್ಮಾನ್ ತನ್ನ ಗೆಳೆಯರನ್ನು ನೋಡಿ ಹಿರಿಹಿರಿ ಹಿಗ್ಗಿದ—ಪ್ರತಿ ಯೊಬ್ಬನನ್ನೂ ಅಪ್ಪಿಕೊಂಡು 'ಮು ಬಾ ರ ಕ್' ಹೇಳಿದ. ಅವರು ಮಾತನಾಡುತ್ತ ಕುಳಿತಿರುವಂತೆ ಬಹೂ ಒಳಗಿನಿಂದ ತಟ್ಟೆ ತಟ್ಟೆ ಬಾದಾಮಿ, ದ್ರಾಕ್ಷಿ, ಕಲ್ಲುಸಕ್ಕರೆ, ಹಣ್ಣು ಕಳುಹಿಸಿದಳು. ಭೀಮಪ್ಪ ಅನುಮಾನಿ ಸುತ್ತಲೇ ಕೇಳಿದ

"ಯಾಕೆ ಖಾನಪ್ಪ, ಮಾಮೂಲು ತಪ್ಪಿಸಿಬಿಟ್ಟೆ."

"ಭೀಮಪ್ಪಣ್ಣ—ಹಾಳು ಕಾಲ ಬಂತಪ್ಪಾ. ಬೆಂಕಿ ನವಾಬರೊಬ್ಬರು ನಮ್ಮ ಪೀರ ಸಾಹೇಬರಾಗಿದ್ದಾರೆ. ಅವರ ಆಜ್ಞೆ. ಅದನ್ನು ಹೇಗೆ ಉಲ್ಲಂಘಿ ಸೋದಕ್ಕೆ ಆ ಗು ತ್ತೆ ಹೇ ಳು. ನೀವೆಲ್ಲಾ ಮನಸ್ಸಿನಲ್ಲಿಟ್ಟುಕೊಳ್ಳದೆ ಮುದುಕನ್ನ ನೋಡೋದಕ್ಕೆ ಬಂದಿರಲ್ಲಾ—"

"ಖಾನಪ್ಪ—ನಿನ್ನಾಗಲಿ ಇತರ ಮುಸಲ್ಮಾನರನ್ನಾಗಲಿ ನಾವು ಹೊರಗಿನವರು ಎಂತ ತಿಳಿದೇಯಿಲ್ಲ. ನಿಮ್ಮ ಜನ ಸುಮ್ಮಸುಮ್ಮನೆ ಹೋಳೀಗೆ ಬರದೆ ಕಿತಾಪತಿ ಎಬ್ಬಿಸಿದ್ದಾರೆ. ನಮ್ಮೋರು ಆಗಲೆ ಮೊಹರಮ್ಮಿಗೆ ಬಹಿಷ್ಕಾರ ಹಾಕಬೇಕೂಂತ ಅಂದ್ಕೊಳ್ಳುತ್ತಿದ್ದಾರೆ."

ಎಂದು ಸಿದ್ದಪ್ಪ ಹೇಳಿದ. ಖಾನನ ಮುಖ ಗಂಭೀರವಾಯಿತು.

"ಸಿದ್ದಪ್ಪ, ಭೀಮಪ್ಪಣ್ಣ—ಕಾಲ ಹೋಗುತ್ತೆ, ಮಾತು ನಿಲ್ಲುತ್ತದೆ

ನೀವೆಲ್ಲಾ ದೇವರಿಗೆ ಹೆದರೋ ಜನ. ಅವಿವೇಕಿಗಳು ಗಲಾಟೆ ಏಳಲಿ ಎಂತ ಮಸಲತ್ತು ಮಾಡ್ತಿದ್ದಾರೆ. ಹೋಳೀಹಬ್ಬದ ವಿಷಯ ಮೊದಲನೆಯ ಕಿಡಿ. ನೀವು ಇದು ಬೆಳೆಯೋಕೆ ಅವಕಾಶ ಕೊಡಬೇಡಿ. ನಾಲ್ಕು ದಿವಸ ಈ ಪೈತ್ಯ ಇರತ್ತೆ—ಆಮೇಲೆ ತಾನೇ ಸರಿಹೋಗುತ್ತೆ."

"ನಿಜ ಖಾನಪ್ಪ—ಆದರ ನಿನ್ನ ಮಗ ಬಾದಶಹ ಬಹಳ ಹಾರಾಡ್ತಾ ಇದ್ದಾನಂತಲ್ಲಾ. ಪೀರ ಸಾಹೇಬನಿಗೆ ಅವನೇ ಬಲಗೈ ಎಂದು ಊರಲ್ಲೆಲ್ಲಾ ಸುದ್ದಿ."

"ಅದು ನಾಕಾಣೆ. ನಿಮ್ಮ ಹುಡುಗರು ತಪ್ಪು ಮಾಡಿದರೆ ದಂಡಿಸೊ ಹಾಗೆ ಅವನನ್ನು ದಂಡಿಸಿ ದಾರಿಗೆ ತನ್ನಿ—ನಿಮಗೆ ಅಧಿಕಾರವಿಲ್ಲವೇ?"

"ಖಾನಪ್ಪ—ನೀನು ಕಲಿಯುಗದ ಮನುಷ್ಯನಲ್ಲವಯ್ಯ"

—ಎಂದು ಪುರೋಹಿತ ವೆಂಕಣ್ಣದಾಸ ಒಪ್ಪಿಕೊಂಡ.

ಸಿದ್ದಪ್ಪ ತಿಳಿಸಿದ ವಿಷಯವನ್ನು ರಾತ್ರಿ ಬಾದಶಹನೊಂದಿಗೆ ಉಸ್ಮಾನ್ ಪ್ರಸ್ತಾಪಿಸಿದ. ತಂದೆಗೂ ಮಗನಿಗೂ ವಿಪರೀತ ಮಾತುಕತೆಯಾಯಿತು. 'ಹಿಂದುಗಳನ್ನೆಲ್ಲಾ ಮಟ್ಟ ಹಾಕಿದ ಹೊರತೂ ಮುಸಲ್ಮಾನರು ಉಳಿಯುವುದು ಸಾಧ್ಯವಿಲ್ಲ' ಎಂದು ಬಾದಶಹ ಹೇಳಿದುದನ್ನು ಕೇಳಿ ಉಸ್ಮಾನನ ಎದೆ ಗಡಗಡ ನಡುಗಿತು.

ಮೊಹರಮ್ಮಿನ ತಯಾರಿ ಆರು ತಿಂಗಳು ಮೊದಲಿನಿಂದಲೇ ಆರಂಭವಾಯಿತು. ಹಿಂದುಗಳು ಭಾಗವಹಿಸದಿದ್ದರೂ ಅದನ್ನು ಪ್ರತಿ ವರ್ಷಕ್ಕಿಂತ ಹೆಚ್ಚು ವಿಜೃಂಭಣೆಯಿಂದ ಮಾಡಬೇಕೆಂದು ಮುಸಲ್ಮಾನರು ನಿಶ್ಚಯ ಮಾಡಿದ್ದರು. ತಾಬೂತುಗಳು, ವೇಷಗಳು, ಎಲ್ಲಾ ಸಿದ್ಧಗೊಂಡವು.

ಮೊಹರಮ್ ಹಬ್ಬಕ್ಕೆ ಕೆಲವು ದಿವಸ ಮುಂಚೆ ಹೊರಗಿನಿಂದ ೫೦-೬೦ ಜನ ಅತಿಥಿಗಳು ಬಂದು ಪೀರ ಸಾಹೇಬರ ಮಸೀದಿಯಲ್ಲಿದ್ದರು. ಹಬ್ಬದ ಎಲ್ಲ ವ್ಯವಸ್ಥೆಯನ್ನೂ ಅವರೇ ನೋಡಿಕೊಳ್ಳುತ್ತಿದ್ದರು.

ಹಿಂದೂ ಮುಖಂಡರು ಸಭೆ ಸೇರಿ, ಗಲಭೆಗವಕಾಶವಾಗದಂತೆ ಹಬ್ಬದ ದಿನ ಹಿಂದುಗಳೆಲ್ಲಾ ಮನೆಯಲ್ಲಿಯೇ ಇರಬೇಕೆಂದೂ ಶಾಂತಿ ಪಾಲನೆ ಮಾಡಬೇಕೆಂದೂ ನಿರೂಪ ಹೊರಡಿಸಿದರು. ತಾಬೂತುಗಳ ಮೆರವಣಿಗೆ ಹೊರಟಿತು. ಮೆರವಣಿಗೆಯ ಯಾಜಮಾನ್ಯದಲ್ಲಿದ್ದವರು

ಉದ್ದೇಶಪೂರ್ವಕವಾಗಿ ಅದನ್ನು ಹಿಂದೂ ಮುಖಂಡರ ಮನೆಗಳ ಮುಂದೂ, ದೇವಸ್ಥಾನಗಳ ಮುಂದೂ ನಿಲ್ಲಿಸಿ 'ಅಲ್ಲಾಹೋ ಅಕ್ಬರ್' ಎಂದು ಘೋಷಿಸುತ್ತಿದ್ದರು. ಯಾವ ದುರಂತ ಘಟನೆಯೂ ನಡೆಯದೆ ಹಬ್ಬ ಶಾಂತ ರೀತಿಯಿಂದ ಸಾಗಿತು.

ಮಾರನೆಯ ಬೆಳಿಗ್ಗೆ ಯಥಾವಿಧಿಯಂತೆ ಗೋಪಾಲಕೃಷ್ಣಸ್ವಾಮಿ ದೇವಾಲಯದ ಅರ್ಚಕ ದೇವಸ್ಥಾನಕ್ಕೆ ಹೋದ. ಅಲ್ಲಿ ಕಂಡ ನೋಟ ಅವನ ರಕ್ತ ಕುದಿಸಿತು. ಯಾರೋ ದುರಾತ್ಮರು ಒಂದು ಹಸುವನ್ನು ಕಡಿದು ದೇವಸ್ಥಾನದ ಪ್ರಾಂಗಣದಲ್ಲಿ ಚೆಲ್ಲಿದ್ದರು. ಸುದ್ದಿ ಕಿಚ್ಚಿನಂತೆ ವ್ಯಾಪಿಸಿತು. ಜನ ಮುಕ್ಕರಿಸುವಂತೆ ತುಂಬಿದರು. ಮುಸಲ್ಮಾನರು ಯಾರೂ ಬಳಿ ಸುಳಿಯಲಿಲ್ಲ.

ಉಸ್ಮಾನನಿಗೆ ಸುದ್ದಿ ಮುಟ್ಟಿದ ಕೂಡಲೆ ಅವನು ದೇವಸ್ಥಾನದ ಬಳಿಗೆ ಓಡಿದ. ಅಲ್ಲಿನ ಹೇಯ ದೃಶ್ಯವನ್ನು ಕಂಡು 'ತೋಬಾ-ತೋಬಾ' ಅಂದ. ಅವನನ್ನು ಕಂಡು ಭೀಮಪ್ಪ ಕಲಿಭೀಮನಾದ

"ಉಸ್ಮಾನ್ ಖಾನ್...."

"ಏನು ಭೀಮಪ್ಪಣ್ಣ...."

"ನಿನ್ನ ಭೀಮಪ್ಪಣ್ಣ ಸತ್ತುಹೋದ–ಹಾಗೇ ನಮ್ಮ ಖಾನಪ್ಪನೂ–ಇನ್ನು ನೀನು ನಮ್ಮನ್ನು ಮಾತನಾಡಿಸಬೇಕಾದ್ದಿಲ್ಲ-ಇಲ್ಲಿಂದ ಹೊರಡು"

ಎಂದ. ಖಾನ್ ಅಲ್ಲಿ ತಗ್ಗಿಸಿದ ತಲೆಯನ್ನು ಮನೆಯಲ್ಲಿಯೇ ಎತ್ತಿದ್ದು. ಭೀಮಪ್ಪನ ಮಾತು ಖಾನನ ಹೃದಯದಲ್ಲಿ ಶಲ್ಯ ನೆಟ್ಟಂತಾಗಿತ್ತು.

'ಕೊನೆಗೂ ಈ ದಿವಸ ಬಂತೇ—ಕೊನೆಗೂ ಈ ಮಾತು ಕೇಳಬೇಕಾಯಿತೇ' ಎಂದು ಹಲುಬಿದ. ಸಂಜೆ ಅಮೀನೆಯ ಸಮಾಧಿಯ ಬಳಿಗೆ ಹೋಗಿ ತನ್ನ ದುಃಖವನ್ನು ತೋಡಿಕೊಂಡು ಗಳಗಳ ಅತ್ತು ಬಂದ.

ಸಂಜೆಹೊತ್ತಿಗೆ ಊರು ರಣರಂಗವಾಯಿತು. ಆಯುಧಪಾಣಿಗಳಾದ ಹಿಂದೂ ಮುಸಲ್ಮಾನರಿಗೆ ಹೊಡೆದಾಟವಾರಂಭವಾಯಿತು. ಎರಡು ಕಡೆಯೂ ಹೆಣಗಳುರುಳಿದವು. ಪೀರ್ ಸಾಹೇಬರ ಅತಿಥಿಗಳು ಸಿದ್ದಪ್ಪನ ಅಂಗಡಿ, ಇನ್ನು ಕೆಲವು ಹಿಂದೂ ಅಂಗಡಿಗಳಿಗೆ ಬೆಂಕಿಯಿಟ್ಟರು. ಬೆಂಕಿ

ಯನ್ನು ಕಂಡ ಕೂಡಲೆ ಒಂದು ಸಶಸ್ತ್ರ ಹಿಂದೂ ಗುಂಪು ಮಸೀದಿಯ ಕಡೆ ಧಾವಿಸಿತು. ಒಳಗೆ ಅಡಗಿದ್ದ ಪೀರ ಸಾಹೇಬನನ್ನು ಎಳೆತಂದು ಇರಿದು ಕೊಂದರು. ಸುದ್ದಿ ಕೂಡಲೆ ಹರಡಿತು—ಮುಸಲ್ಮಾನರು ಮಸೀದಿಯ ಕಡೆ ಧಾವಿಸಿದರು. ಅಷ್ಟುಹೊತ್ತಿಗೆ ನಗರದಿಂದ ಬಂದ ಮಿಲ್ಟ್ರಿ ಊರನ್ನು ವಶಮಾಡಿಕೊಂಡು 'ಕರ್‌ಫ್ಯೂ' ಆಜ್ಞೆ ವಿಧಿಸಿತು.

ಮಾರನೆಯ ದಿನ ನೂರಾರು ಹಿಂದೂ ಮುಸ್ಲಿಮ ಮುಖಂಡರನ್ನು ದಸ್ತಗಿರಿಮಾಡಿದರು. ಪತ್ರಿಕೆಗಳಲ್ಲಿ 'ಮೈಳೂರ ದುರಂತ' ಪುಟಗಟ್ಟಲೆ ಬರತೊಡಗಿತು. ಹಿಂದೂ ಪತ್ರಿಕೆಗಳ ವರದಿ ಒಂದು ತೆರನಾದರೆ ಮುಸಲ್ಮಾನ ಪತ್ರಿಕೆಗಳ ವರದಿ ಇನ್ನೊಂದು ಬಗೆ. ಒಬ್ಬರ ಮೇಲೆ ಒಬ್ಬರು ತಪ್ಪು ಹಾಕಿ ತಾವು ನಿರಪರಾಧಿಗಳೆಂದು ತೋರಿಸಿಕೊಳ್ಳಲೆತ್ನಿಸಿದರು.

ಗಲಭೆ ಹತೋಟಿಗೆ ಬಂದ ಮೇಲೆ ಆಪಾದಿತರ ಬಿಡುಗಡೆಯಾಯಿತು. ಸರ್ಕಾರ ಹಿಂದುಗಳ ಪಕ್ಷ ಹಿಡಿಯಿತು ಎಂದು ಮುಸಲ್ಮಾನರೆಂದರು; ಅದು ಮುಸಲ್ಮಾನರ ಪಕ್ಷ ಹಿಡಿಯಿತೆಂದು ಹಿಂದುಗಳು ಆಕ್ಷೇಪಿಸಿದರು.

ಮುಸಲ್ಮಾನರ ಪಕ್ಷ ಹಿಡಿದು ಬಹಳ ಗೊಂದಲ ಎಬ್ಬಿಸಿದವರು ಬಂಗಾಳದ ಮುಸಲ್ಮಾನರು. ಬಂಗಾಳದ ಮಹಾಪ್ರಧಾನಿಗಳು ಮೈಳೂರ ಮುಸಲ್ಮಾನರಿಗೆ ಸಂದೇಶ ಕಳುಹಿಸಿ 'ನೀವೆಲ್ಲಾ ಬಂಗಾಳಕ್ಕೆ ಬನ್ನಿ—ಇಲ್ಲಿ ಇರಲು ಅನುಕೂಲ ಮಾಡಿಕೊಡುತ್ತೇವೆ' ಎಂದು ತಿಳಿಸಿದರು. ಸತ್ತಾರ್, ಬಾದಶಹ, ಅಹಮದ್ ಆಲಿ ಮೊದಲಾದವರು ಮುಸ್ಲಿಮರ ಸಭೆ ಸೇರಿಸಿ ಮೈಳೂರನ್ನು ತ್ಯಜಿಸುವುದು ಶ್ರೇಯಸ್ಕರವೆಂದು ನಿರ್ಧರಿಸಿದರು.

ಹಿಂದೂ ಮುಖಂಡರು ಸಭೆ ಸೇರಿಸಿ ಸತ್ತಾರ್ ಮೊದಲಾದವರನ್ನು ಕಂಡು

'ಬೇಡಿ–ಹೋಗಬೇಡಿ. ಆದದ್ದು ಆಗಿಹೋಯಿತು. ಹಿಂದೆ ಬಹಳ ವರ್ಷಗಳಿಂದ ಅನ್ಯೋನ್ಯವಾಗಿದ್ದೆವು. ಮುಂದೆಯೂ ಇರಲು ಸಾಧ್ಯ. ಮೈಳೂರು ನಮ್ಮದು ಹೇಗೋ ಹಾಗೆ ನಿಮ್ಮದೂ ಆಗಿದೆ. ಇಬ್ಬರೂ ಒಪ್ಪಂದ ಮಾಡಿಕೊಂಡು ಸುಖವಾಗಿರೋಣ'

ಎಂದು ಹೇಳಿದರು. ಸತ್ತಾರ್, ಬಾದಷಹ 'ಸಾಧ್ಯವಿಲ್ಲ' ಎಂದು ಖಡಾಖಂಡಿತವಾಗಿ ಹೇಳಿಬಿಟ್ಟರು.

ಮೈಳೂರಿನ ಮುಸಲ್ಮಾನರಲ್ಲಿ ಬಹಳ ಮಂದಿ ಸಣ್ಣಪುಟ್ಟ ಉದ್ಯೋಗಸ್ಥರು, ರೈತರು. ತಮ್ಮ ಆಸ್ತಿಗಳನ್ನು ಮಾರಲು ಮೊದಲು ಮಾಡಿದರು. ಭೀಮಪ್ಪ, ಕೃಷ್ಣಮೂರ್ತಿ ಮುಂದೆ ನಿಂತುಕೊಂಡು ಅವರಿಗೆ ಅನ್ಯಾಯವಾಗದಂತೆ ಸರಿಯಾದ ಬೆಲೆ ಕೊಡಿಸಿದರು.

ಹೊರಡುವ ದಿನವೂ ನಿಶ್ಚಯವಾಯಿತು. ಅಂದು ಅವರಿಗಾಗಿ ಬಂಗಾಳಾ ಸರ್ಕಾರ ಒಂದು 'ಸ್ಪೆಷಲ್ ಟ್ರೇನ್' ವ್ಯವಸ್ಥೆ ಮಾಡಿತ್ತು. ಮುಸಲ್ಮಾನರು ಸಾಲುಸಾಲಾಗಿ 'ದೀನ್ ದೀನ್' 'ಅಲ್ಲಾ ಹೊ ಅಕ್ಬರ್' ಘೋಷ ಮಾಡಿಕೊಂಡು ಹೊರಟರು.

ಉಸ್ಮಾನ್ ಹೊರಡಲೊಲ್ಲ – ಬಾದಶಹ ಬಿಡಲೊಲ್ಲ. "ದಾದಾ ನೀನು ಹೊರಡದಿದ್ದರೆ ನಿನ್ನನ್ನು ಕಟ್ಟಿ ಹೊತ್ತುಕೊಂಡು ಹೋಗುತ್ತೇನೆ."

ಎಂದು ಬೆದರಿಕೆ ಹಾಕಿದ. ಉಸ್ಮಾನ್ ವಿಧಿಯಿಲ್ಲದೆ ಹೊರಟು ನಿಂತ. ಕೊನೆಯ ಬಾರಿಗೆ ಅಮೀನಾ ಸಮಾಧಿಯನ್ನು ಕಂಡು ಬರಲು ಅತ್ತ ಹೋದ.

"ಹೋಗುತ್ತೇನೆ ಅಮೀನಾ—ಮತ್ತೆ ಬರುತ್ತೇನೆಯೋ ಇಲ್ಲವೋ"

ಎಂದು ಕಂಬನಿಗರೆದ. ಅವನನ್ನು ಹುಡುಕುತ್ತಾ ಭೀಮಪ್ಪ, ಕೃಷ್ಣಮೂರ್ತಿ, ಸಿದ್ದಪ್ಪ ಅತ್ತಲೇ ಬಂದರು. ಎಲ್ಲರೂ ಉಸ್ಮಾನನನ್ನು 'ಅಪ್ಪಿ'ಕೊಂಡು ಗೊಳೋ ಎಂದು ಅತ್ತರು.

"ಭೀಮಪ್ಪಣ್ಣ–ಹಾಗೆ ಕರೆಯಬಹುದು ತಾನೇ."

"ಕರೆ–ಖಾನಪ್ಪ."

"ಚೆನ್ನಕ್ಕನನ್ನು ನೋಡಲಿಲ್ಲ. ಅವಳಿಗೆ ನನ್ನ ಜ್ಞಾಪಕ ಕೊಡು."

"ಆಗಲಿ ಖಾನಪ್ಪ."

"ಕೃಷ್ಣಮೂರ್ತಿಸ್ವಾಮಿ — ಸಿದ್ದಪ್ಪಸ್ವಾಮಿ — ಅಲ್ಲಿ ನನ್ನ ಅಮೀನಾ...."

ದುಃಖ ಉಸ್ಮಾನನಿಗೆ ಉಕ್ಕಿ ಬಂತು.

ಕೃಷ್ಣಮೂರ್ತಿ ಕಂಬನಿಯ ಮಧ್ಯೆ.

"ನಮ್ಮ ತಾಯಿ ಮಲಗಿದ್ದಾಳೆ ಖಾನಪ್ಪ. ಯೋಚನೆಮಾಬೇಡ— ಅದು ನಮ್ಮ ತಾಯಿ ದೇವಸ್ಥಾನ. ಶುಚಿಯಾಗಿಟ್ಟು ನೋಡಿಕೊಳ್ಳುತ್ತೇವೆ."

" ಅಣ್ಣ ನಿಮ್ಮನ್ನೆಲ್ಲ ಬಿಟ್ಟು ಹೋಗಬೇಕೇ ? ''

" ಖಾನಪ್ಪ–ಮೈಳೂರು ನಿಜವಾಗಿ ತಬ್ಬಲಿ ಹಾಗೆ ಕಾಣುತ್ತದೆ."

" ನಾನು ಯಾವಾಗಲಾದರೂ ಬರಬಹುದೇ ?—ಬಂದರೆ ನಿಮಗೆ ಕೋಪಬರುವುದೇ ? ''

" ಖಾನಪ್ಪ–ಇದು ನಿನ್ನ ಮನೆ–ಯಾವಾಗ ನೀನು ಬಂದರೂ ಇದು ನಿನ್ನದೇ. ''

ಎಂದು ಎಲ್ಲರೂ ಉಸ್ಮಾನನ್ನು ಸಮಾಧಾನ ಮಾಡಿ ಕಳುಹಿಸಿ ಕೊಟ್ಟರು.

ಮೈಳೂರಿನ ಮುಸಲ್ಮಾನರಿಗೆ ಬಂಗಾಳದಲ್ಲಿ ರಾಂಪುರದ ವಸತಿ ಮಾಡಲ್ಪಟ್ಟಿತ್ತು. ಅವರು ಹೋಗುವ ಮುನ್ನ ರಾಂಪುರದ ಹೆಸರು 'ಇಸ್ಲಾಂಪುರ' ವೆಂದು ಬದಲಾಯಿಸಲ್ಪಟ್ಟಿತ್ತು. ಎಲ್ಲರಿಗೂ ಸ್ವಲ್ಪ ಜಾಗ ಕೊಡಲಾಯಿತು. ಮೈಳೂರು ಮುಸಲ್ಮಾನರು ತಮ್ಮ ಬಾಳನ್ನು ಮತ್ತೆ ನಿರ್ಮಿಸಲಾರಂಭಿಸಿದರು.

ಇವರು ಬಂದು ನೆಲಸಿದುದು ರಾಂಪುರದ ಮುಸಲ್ಮಾನರಿಗೆ ಕಹಿ ಯಾಯಿತು. ರಾಂಪುರದವರೇ ಒಂದು ಗುಂಪು ; ಮೈಳೂರಿನವರದೇ ಒಂದು ಗುಂಪಾಯಿತು. ಒಬ್ಬರನ್ನೊಬ್ಬರು ನಾಯಿ ಬೆಕ್ಕುಗಳಂತೆ ಕಾಣು ತ್ತಿದ್ದರು. ನೀರಿಗೆ ಆಗಾಗ್ಗೆ ಜಗಳವಾಗುತ್ತಿತ್ತು.

ರಾಂಪುರದವರಿಗೂ ಮೈ ಳೂ ರಿ ನ ವ ರಿ ಗೂ ಬೆರೆಯದಿದ್ದುದಕ್ಕೆ ಇನ್ನೊಂದು ಕಾರಣ. ರಾಂಪುರದವರು ಬಂಗಾಳಿ ಮಾತನಾಡುತ್ತಿದ್ದರು– ಮೈಳೂರಿನವರಿಗೆ ಕನ್ನಡ ಬಿಟ್ಟು ಬೇರೆ ಭಾಷೆ ಬಾರದು. ಮೈಳೂರಿನವರು ತಮ್ಮ ಹೊಸ ಊರಿನ ಭಾಷೆಯನ್ನು ಕಲಿಯದೆ ಗತ್ಯಂತರವಿಲ್ಲವಾಯಿತು.

ರಾಂಪುರದ ಹಣಕಾಸಿನ ವ್ಯವಹಾರವೆಲ್ಲಾ ಪಠಾಣರ ಕೈಯಲ್ಲಿತ್ತು. ಪಠಾಣರು, ರಾಂಪುರದವರು ಸೇರಿಕೊಂಡು ಮೈಳೂರಿನವರನ್ನು ಸುಲಿಯ ತೊಡಗಿದರು. ಸತ್ತಾರ್, ಅಹಮದಲ್ಲಿ ಕೂಡ ಹಲವು ಸಲ ಸಿದ್ದಪ್ಪಣ್ಣನ ಧರ್ಮದ ಲೇವಾದೇವಿಯನ್ನು ಜ್ಞಾಪಿಸಿಕೊಳ್ಳುವಂತಾಯಿತು. ದಿನ ಸಾಗುತ್ತ ಸಾಗುತ್ತ ಮೈಳೂರ ಮುಸಲ್ಮಾನರು ತಮ್ಮ ಅವಿವೇಕಕ್ಕೆ

ಮರುಗುವಂತಾಯಿತು. ಆದರೆ ಬೇರೆ ಮಾರ್ಗವಿಲ್ಲ—ತಾವೇ ಬಯಸಿ ಬಯಸಿ ಹುರಿಯುವ ಓಡಿಗೆ ಹಾರಿಕೊಂಡಿದ್ದರು.

ಉಸ್ಮಾನನಿಗೆ ರಾಂಪುರ ಸಾಕುಸಾಕಾಗಿ ಹೋಗಿತ್ತು. ಒಂದು ದಿನ ಗಂಟುಮೂಟೆ ಕಟ್ಟಿ ಮೈಲೂರಿಗೆ ಹೊರಟೇಬಿಟ್ಟ. ಬಾದಶಹ ಇನ್ನಿಲ್ಲದ ಹಾಗೆ ತಂದೆಯ ಪ್ರಯಾಣ ನಿಲ್ಲಿಸಲೆತ್ನಿಸಿದ. ಅವನ ಸಾಹಸ ಮುದುಕನ ನಿರ್ಧಾರದ ಮುಂದೆ ಪ್ರಯೋಜನಕ್ಕೆ ಬರಲಿಲ್ಲ. ಹೋಗುವ ಮುನ್ನ ಬಹೂರಾಣಿಯನ್ನು ಕರೆದು

"ಬೇಟೀ – ಬಾದಶಹನನ್ನು ಚೆನ್ನಾಗಿ ನೋಡಿಕೋ. ಮತ್ತೆ— ಇಲ್ಲಿಗೆ ಬಂದು ನಿಮ್ಮನ್ನು ನೋಡುತ್ತೇನೆಯೋ ಇಲ್ಲವೋ" ಎಂದ.

"ಏಕೆ ದಾದಾ – ಬರಬಾರದೆಂದೇ ಹೊರಟಿದ್ದೀರಾ ?"

"ಹಾಗಲ್ಲ. ನನ್ನ ವಯಸ್ಸೇನು – ನಾನು ತಿರುಗಿ ಅಷ್ಟು ದೂರದಿಂದ ಬರುವುದೆಂದರೇನು ?"

"ನೀವು ಬರಲೇಬೇಕು ದಾದಾ – ನೀವು ಬರದಿದ್ದರೆ ನಮಗೆ ಯಾರು ದಿಕ್ಕು."

ಎಂದು ಕಂಬನಿಗರೆದಳು.

ಉಸ್ಮಾನ ಮಗನನ್ನು ಬಾಚಿ ಅಪ್ಪಿಕೊಂಡು 'ಜೀತೇರಹೋ ಬೇಟಾ' ಎಂದು ಆಶೀರ್ವದಿಸಿ ರೈಲು ಹತ್ತಿದ. ತಂದೆ ಹತ್ತಿ ಹೋದ ಗಾಡಿ ನೋಡುತ್ತ ಬಾದಷಹ ನಿಂತ. ಅವನ ಮನಸ್ಸು ರಾಂಪುರದಲ್ಲಿರಲಿಲ್ಲ.

ಉಸ್ಮಾನನ್ನು ಕಂಡ ಭೀಮಪ್ಪ, ಸಿದ್ದಪ್ಪ, ಕೃಷ್ಣಮೂರ್ತಿ ಕುಣಿದಾಡಿದರು. ಭೀಮಪ್ಪ ಖಾನನ್ನು ಮನೆಗೆ ಕರೆದೊಯ್ದು ಔತಣದ ಊಟ ಮಾಡಿಸಿದ. ಊರಿಗೇ ಊರೇ ಖಾನಪ್ಪನನ್ನು ನೋಡಲು ಬಂತು. ಎಲ್ಲರಿಗೂ ರಾಂಪುರದ ಕಥೆ ಹೇಳಿದ.

"ಈಗಲೂ ಎಲ್ಲರೂ ಬರಲಿ–ಪ್ರೇಮದಿಂದ ಬರಮಾಡಿಕೊಳ್ಳುತ್ತೇವೆ" ಎಂದು ಮೈಲೂರಿನವರು ಹೇಳಿದರು. 'ಅದು ಸಾಧ್ಯವಾಗದ ಮಾತು' ಎಂದು ಉಸ್ಮಾನ್ ದುಃಖದಿಂದ ತಿಳಿಸಿದ.

ಸಂಜೆ ಉಸ್ಮಾನ್ ಒಬ್ಬನೇ ಮಸೀದಿಯ ಕಡೆ ಹೊರಟ. ಒಳ ಹೊಕ್ಕು ನೋಡುತ್ತಾನೆ. ಅದೇ ಮಸೀದಿ – ತಾವಿದ್ದಾಗ ಇದ್ದಂತೆ

ಶುಭ್ರವಾಗಿದೆ. ಮುಸಲ್ಮಾನರು ಹೊರಟುಹೋದರೆಂದು ಹಿಂದುಗಳು ಅದನ್ನು ನೆಲಸಮಮಾಡುವ ದೌರ್ಜನ್ಯ ತೋರಿರಲಿಲ್ಲ. ಉಸ್ಮಾನನ ಮನಸ್ಸು ಆನಂದಗೊಂಡಿತು. ಮಸೀದಿಯಲ್ಲೊಮ್ಮೆ ಭಕ್ತಿಯಿಂದ ನಮಾಜ್‌ಮಾಡಿ, ಅಮೀನಾ ಸಮಾಧಿಯ ಬಳಿ ತೆರಳಿದ.

ಸಮಾಧಿಗೆ ಸುಣ್ಣ ಬಣ್ಣಮಾಡಿಸಿ ಊರಿನವರು ತಮ್ಮ ವಾಗ್ದಾನ ಕಾಪಾಡಿಕೊಂಡಿದ್ದರು.

ಉಸ್ಮಾನ್ ಸಮಾಧಿಯ ಬಳಿ ಕುಳಿತು ಪ್ರೀತಿಯಿಂದ ಅದನ್ನು ಮುದ್ದಿಟ್ಟು

"ಪ್ಯಾರಿ ಅಮೀನಾ....ಇಗೋ ಬಂದಿದ್ದೇನೆ....ತಡವಾಯಿತೆಂದು ಕೋಪಿಸಿಕೊಳ್ಳಬೇಡ."

ಎಂದುಸುರಿ ಅದರ ಮೇಲೆ ತಲೆಯೊರಗಿಸಿ ಮಲಗಿದ. ಸುಖವಾಗಿ ನಿದ್ರೆ ಹತ್ತಿತು. ಅಂಥ ನಿದ್ರೆ ಉಸ್ಮಾನ್ ಅನುಭವಿಸಿದುದು ಅದೇ ಮೊದಲು ಅದೇ ಕೊನೆ.

ಬೆಳಿಗ್ಗೆ ಉಸ್ಮಾನನನ್ನು ಹುಡುಕಿಕೊಂಡು ಬಂದ ಭೀಮಪ್ಪ, ಸಿದ್ದಣ್ಣ ತಮ್ಮ ಹೆಗಲಮೇಲಿದ್ದ ವಸ್ತ್ರಹಾಸಿ ಅವನನ್ನು ಮಲಗಿಸಿದರು. ಉಸ್ಮಾನ್ ಚಿರನಿದ್ರೆಯಲ್ಲಿ ವಿಲೀನನಾಗಿ, ಅಮೀನಾ ತಾಯಿಯನ್ನು ಸೇರಿದ್ದಾನೆಂದು ಅವರು ತಿಳಿಯಲು ತಡವಾಗಲಿಲ್ಲ.

ಅಮೀನಾ ಸಮಾಧಿಯ ಬಳಿಯಲ್ಲೇ ಉಸ್ಮಾನನ ಸಮಾಧಿ ಮಾಡಿದರು. ಊರಿನವರೆಲ್ಲಾ ಸೇರಿ ಸಮಾಧಿಗೆ ಹೂವು ಹಾಕಿದರು.

—ಇಂದಿಗೂ ಮೈಳೂರಿನಲ್ಲಿ ವರ್ಷಕ್ಕೊಮ್ಮೆ 'ಖಾನಪ್ಪನ ಹಬ್ಬ' ವಾಗುತ್ತದೆ. ಅದನ್ನು ನೋಡುವುದಕ್ಕೆ ದೂರ ದೇಶಗಳಿಂದ ಜನ ಬರುತ್ತಾರೆ. ರಾಂಪುರದಿಂದಲೂ ಆಗಿಂದಾಗ್ಗೆ ಜನ ಬರುತ್ತಾರೆ. ಹಿಂದುಗಳ ಮನೆಯಲ್ಲಿ ಖಾನಪ್ಪನನ್ನು ನೆನೆಯದೆ, ಅವನ ಹೆಸರಿಗೆ 'ಬಂಡಾರ' ಎತ್ತಿಡದೆ ಯಾವ ಪುಣ್ಯ ಕೆಲಸವೂ ಆಗುವುದಿಲ್ಲ. ಊರಿನಲ್ಲಿ ಏನು ಒಳ್ಳೆಯದಾದರೂ, 'ನಮ್ಮ ಖಾನಪ್ಪನ ಆಶೀರ್ವಾದ' ಎನ್ನುತ್ತಾರೆ.

ಖಾನಪ್ಪ ಮೈಳೂರಿನ ಜನರ ಹೃದಯದಲ್ಲಿ ಅಮರಜೀವಿ.



# ಪೂರ್ವ - ಪಶ್ಚಿಮ

ತಾಯಿ ಹೋದ ಮೇಲೆ ಮನೆಯ ಕಟ್ಟೇ ಸಡಲಿತು. ತಂದೆ ಹೋದ ಮೇಲಂತೂ ಯಾವ ಬಿಗಿಯೂ ಉಳಿಯಲಿಲ್ಲ. ಇದ್ದ ನಾಲ್ಕು ಜನ ನಾಲ್ಕು ದಾರಿ ಹಿಡಿದರು. ಅವರವರಲ್ಲಿ ಹೊಂದಿಕೆ, ಒಮ್ಮತಿ ಸಮ್ಮತಿ ಇಲ್ಲವಾಗುತ್ತ ಬಂತು.

ಮನೆಯಲ್ಲಿ ಮೊದಲಿನಿಂದಲೂ ಚಂದ್ರನ ದಾರಿಯೇ ಒಂದು – ಉಳಿದವರ ದಾರಿ ಒಂದು. ಶ್ರೀನಿವಾಸಮೂರ್ತಿ, ಕಾಂತಾ, ಕುಮುದ ಒಂದು ಪಕ್ಷ ಹಿಡಿಯುತ್ತಿದ್ದರು. ಚಂದ್ರಶೇಖರ ಬೇರೆ ಪಕ್ಷ ಹಿಡಿದು ವಾದಿಸುತ್ತಿದ್ದ. ತಂದೆ ಉಭಯ ಪಕ್ಷದ ಮೇಲೂ ಅಭಯಹಸ್ತ ನೀಡುತ್ತಿದ್ದರು. ಅವರಿಗೂ ಚಂದ್ರಶೇಖರನ ರೀತಿನೀತಿ ಸರಿಬೀಳುತ್ತಿರಲಿಲ್ಲ. ಚಂದ್ರಶೇಖರ ತನ್ನ ಮನೆಯಲ್ಲಿಯೇ ಹೊರಗಿನವನಾಗಿದ್ದ.

ತಂದೆ ಚಂದ್ರಶೇಖರನ ಮೇಲೆ ಅಸಮಾಧಾನ ತಾಳುವುದಕ್ಕಿದ್ದ ಕಾರಣ ಬೇರೆ. ಅವರು ದಿವಾನರ ಕಛೇರಿಯ ಸೂಪರಿಂಟೆಂಡೆಂಟರು. ಮಗ ಎಲ್ಲ ರಾಜಕೀಯ ಚಳುವಳಿಗಳಲ್ಲಿ ಭಾಗವಹಿಸಿ, ಮೂರು ಮೂರು

ದಿವಸಕ್ಕೆ ಜೈಲಿಗೆ ಹೋಗುತ್ತಿದ್ದರೆ ಅವರ ಪರಿಸ್ಥಿತಿ ಕಠಿಣವಾಗದೆ ಏನು? ಅವನ ಉಗ್ರ ರಾಷ್ಟ್ರವಾದ ಅವರಿಗೆ ಹಿಡಿಯುತ್ತಿರಲಿಲ್ಲವೆಂದಲ್ಲ – ಆದರೆ ಸರ್ಕಾರಿ ನೌಕರಿಯಲ್ಲಿರುವವರು ಸ್ವತಂತ್ರ ವಿಚಾರ ಮಾಡುವುದು ತಪ್ಪೆಂದು ಅವರು ಭಾವಿಸಿದ್ದರು.

ಶ್ರೀನಿವಾಸಮೂರ್ತಿ ಎಂ.ಬಿ.ಬಿ.ಎಸ್. ಪಾಸುಮಾಡಿ ಡಾಕ್ಟರಾಗಿ ಬೋರ್ಡು ಹಾಕಿದ್ದ. ಪ್ರ್ಯಾಕ್ಟೀಸು ಹೇಳಿಕೊಳ್ಳುವಷ್ಟು ಅದ್ದೂರಿಯಾಗಿರದಿದ್ದರೂ, ಮನೆಯಲ್ಲಿ ಬಾಡಿಗೆಯ ಹಣ ಕೇಳುವಷ್ಟು ಕಡೆಯಾಗಿರಲಿಲ್ಲ. ಒಂದೊಂದು ತಿಂಗಳು ಕೈತುಂಬ ಕಾಸೂ ಬರುತ್ತಿತ್ತು. ಮೂರ್ತಿಯ ಕೈಗೆ ಸಿಕ್ಕಿದ ರೋಗಿ ಸಾಮಾನ್ಯವಾಗಿ ಬೇರೆ ಕಡೆ ಹೋಗುತ್ತಿರಲ್ಲಿಲ್ಲ. ಮೂರ್ತಿ ತನ್ನ ವೃತ್ತಿಯಲ್ಲಿ ತುಂಬ ನಿಷ್ಣಾತನಾಗಿದ್ದನೆಂದು ಅಭಿಪ್ರಾಯವಲ್ಲ. ರೋಗಿ ಬೇರೆ ಕಡೆ ಹೋಗಿ ಔಷಧ ತೆಗೆದುಕೊಳ್ಳಲಾಗದಷ್ಟು ಅವನ ಆರೋಗ್ಯ ಕೆಡಿಸುವ ಕಲೆ ಮೂರ್ತಿಗೆ ಸಾಧಿಸಿತ್ತು.

ಅಣ್ಣನ 'ರಕ್ತಶೋಷಣ ಕಲೆ' ಚಂದ್ರಶೇಖರನಿಗೆ ತುಂಬ ಕೋಪವನ್ನುಂಟು ಮಾಡುತ್ತಿತ್ತು. ಮೊದಲೇ ರಾಷ್ಟ್ರವಾದಿ. ಭಾರತೀಯರು 'ಅಲೋಪತಿ' ಪದ್ಧತಿಯ ಔಷಧ ತೆಗೆದುಕೊಳ್ಳುವುದು ತಪ್ಪೆಂದು ಚಂದ್ರನ ವಾದ. ಅಲೋಪತಿ ಭಾರತವರ್ಷದ ಹವಾಮಾನಕ್ಕೆ ಒಗ್ಗುವುದಿಲ್ಲ, ಅಲೋಪತಿಯ ತಲೆಬೆಲೆಯನ್ನು ತೆರುವಷ್ಟು ಭಾರತೀಯರು ಶ್ರೀಮಂತರಲ್ಲ. ಇವುಗಳ ಜತೆಗೆ ಕಾಲಾಣೆ ಅರ್ಧಾಣೆ ಖರ್ಚಿನಲ್ಲಿ ದೇಶೀಯ ಆಯುರ್ವೇದ ಪದ್ಧತಿಯಿಂದ ರೋಗಗಳನ್ನು ವಾಸಿಮಾಡಲು ಸಾಧ್ಯವಾಗುವಾಗ ಸುಮ್ಮನೆ ಜನರ ಗಂಟಲಲ್ಲಿ 'ಅಲೋಪತಿ' ತುರುಕಿ ಅವರಿಂದ ಹಣ ಸೆಳೆಯುವುದು ಒಂದು ತೆರನ 'ದರೋಡೆ' ಎಂದು ಅವನ ಮತ. ವೈದ್ಯದ ಮಾತು ಬಂತೆಂದರೆ ಅಣ್ಣತಮ್ಮಂದಿರ ವಾಜ್ಯ ಹರಿಯುತ್ತಲೇ ಇರಲಿಲ್ಲ.

ಕಾಂತಾ ಕಾಲೇಜಿನಲ್ಲಿ ಓದುತ್ತಿದ್ದಳು. ಆದರವಳು ತನ್ನದೇ ಒಂದು ಪ್ರಪಂಚವನ್ನು ಸೃಷ್ಟಿಸಿಕೊಂಡಿದ್ದಳು. ಆ ಪ್ರಪಂಚದ ತುಂಬ ಸಿನೀಮಾ ನಟಿಯರು, ಮ್ಯಾಕ್ಸ್‌ಫ್ಯಾಕ್ಟರ್ ಸ್ಟೂಡಿಯೋ. ರೀಟಾ ಹೇವರ್, ಗ್ರೀಯರ್ ಗಾರ್ಸನ್, ಪಾಲೆಟ್ ಗೋಡಾರ್ಡ್ ಅವರ ಜೀವನ,

ವಯಸ್ಸು, ಅಂಗಾಂಗಗಳ ಅಳತೆ, ಸಂಬಳ ಮೊದಲಾದ ವಿಷಯಗಳ ಸಂಪೂರ್ಣ ಪರಿಚಯ ಕಾಂತಳಿಗಿತ್ತು. 'ಫಿಲ್ಮ್ ಇಂಡಿಯಾ' 'ಸ್ಟೂಡಿಯೋ' 'ಟಾಕಟೋನ್' ಪತ್ರಿಕೆಗಳ ಕಂಠಪಾಠ ಒಪ್ಪಿಸುತ್ತಿದ್ದಳು. ದೇವಿಕಾರಾಣಿಯ ಹಾಗೆ ಗುಂಗುರು ತಿದ್ದಿಗೊಳ್ಳುವುನು, ನೀನಾ ಹಾಗೆ ಉಗುರು ಬೆಳಸುವುದು, ಸ್ವರ್ಣಲತಾ ಹಾಗೆ ಜಾಕೀಟು ಹೊಲಿಸುವುದು, ನೂರ್‌ಜಿಹಾನ್ ಹಾಗೆ ಸೀರೆ ಉಡುವುದೆಂದರೆ ಅವಳಿಗೆ ತುಂಬ ಇಷ್ಟ. ದುರ್ಗಾಖೋಟೆಯ ಹಾಗೆ ಅಭಿನಯಿಸಲು ಬರುತ್ತಿರಲಿಲ್ಲ, ಅಮಿರಾಂ ಕರ್ನಾಟಕಿ ಹಾಗೆ ಹಾಡಲು ಬರುತ್ತಿರಲಿಲ್ಲ. ಆದರೆ ಅದನ್ನು ಕೊರತೆಯೆಂದು ಕಾಂತಾ ಭಾವಿಸಿರಲಿಲ್ಲ. ಅವಳ ಕೋಣೆ ತುಂಬ ಸಿನೀಮಾ ನಟ, ನಟಿಯರ ಚಿತ್ರಗಳು.

ಅವಳ ಕೃತಕ ಪ್ರಪಂಚ ಚಂದ್ರಶೇಖರನಿಗೆ ಸ್ವಲ್ಪವು ಸೇರುತ್ತಿರಲಿಲ್ಲ. ಚಂದ್ರಶೇಖರ ಗಾಂಧಿ ಭಕ್ತನಾಗಿದ್ದರೂ ಸಿನೀಮಾ ದ್ವೇಷಿಯಾಗಿರಲಿಲ್ಲ. ಸಿನೀಮಾ ಪ್ರೇಮ ಅತಿರೇಕಕ್ಕೆ ಮುಟ್ಟಿ ಸದಾ ಅದೇ ಧ್ಯಾನ, ಮನನಮಾಡುವಷ್ಟು ಮೂರ್ಖನಾಗಿರಲಿಲ್ಲ. ಅಂತಹ ಮೂರ್ಖತೆಯನ್ನು ಕಂಡರೆ ಅವನು ಸಿಡಿದುಬೀಳುತ್ತಿದ್ದ.

ಕುಮುದ ಎಲ್ಲರಿಗಿಂತ ಚಿಕ್ಕವಳು. ಅವಳೂ ಹೈಸ್ಕೂಲಿನಲ್ಲಿದ್ದಳು. ಕಾಂತಕ್ಕನ 'ಬಾಲಂಗೋಚಿ'ಯಾಗಿರುವುದೇ ಒಂದು ಹೆಮ್ಮೆ ಅವಳಿಗೆ. ಕಾಂತಕ್ಕ ನಿರ್ದಾಕ್ಷಿಣ್ಯದಿಂದ ಅವಳ ಕೈಯಲ್ಲಿ ತನ್ನ ಚಾಕರಿಮಾಡಿಸುತ್ತಿದ್ದಳು. ಆಗಾಗ ಕಾಂತಕ್ಕ ಒಂದು ಪೌಡರ್ ಡಬ್ಬವನ್ನೋ ನಾಲ್ಕು ಕರ್ಲ್ ಪಿನ್‌ಗಳನ್ನೋ ಕೊಟ್ಟರೆ ಕುಮುದ ಕುಣಿದು ಕುಪ್ಪಳಿಸುತ್ತಿದ್ದಳು.

ಇಂಥ ಭಿನ್ನಭಿನ್ನ ಮನೋಭಾವವನ್ನು ಕೂಡಿದ ಕೆಲವು ದಿನ ಶಾಮಲೆಗೆ ಕಷ್ಟಕ್ಕೆ ಬಂದಿತು. ಯಾರ ಪಕ್ಷ ವಹಿಸಿದರೂ ಅವಳಿಗೆ ಅಪಖ್ಯಾತಿ ಖಂಡಿತ. ಶಾಮಲೆ ದೊಡ್ಡ ಆಫೀಸರ ಮಗಳಾಗಿದ್ದುದು ಒಂದು ಹೆಮ್ಮೆ. ಎಷ್ಟೋಸಲ ತಾನು ಬಡ ಶ್ರೀನಿವಾಸಮೂರ್ತಿಯನ್ನು ಕೈಹಿಡಿದುದು ತಪ್ಪಾಯಿತೆಂದು ಹಲುಬಿದ್ದಳು. ಆದರೆ ಒಂದಲ್ಲೊಂದು ದಿನ ತನ್ನ ಗಂಡ 'ಸೀನಿಯರ್ ಸರ್ಜನ್' ಆಗಬಹುದೆಂಬ ಧೈರ್ಯ ಅವಳ ಮನಸ್ಸನ್ನು ಹಗುರಮಾಡಿತ್ತು.

ಶಾಮುಲೆಗೂ ಕಾಂತನಿಗೂ ಮೊದಲಿನಿಂದಲೇ ವಿಶೇಷ ಸ್ನೇಹ ಬೆಳೆಯಿತು. ತಂದೆ ಹೋದ ಮೇಲೆ ಶ್ರೀನಿವಾಸಮೂರ್ತಿಯೇ ಮನೆ ಯಜಮಾನನಾದ. ಶಾಮುಲೆ ಯಜಮಾನಿತಿ. ಅವಳನ್ನು 'ಬೊಕ್ಕೆ'ಗೆ ಹಾಕಿಕೊಳ್ಳದಿದ್ದರೆ ನಾಳೆ ಖರ್ಚಿಗೆ ಭಂಡಾಟವಾಗುವುದೆಂದು ಗ್ರಹಿಸಿದ್ದ ಕಾಂತಾ ಅತ್ತಿಗೆಯ ಅಚ್ಚುಮೆಚ್ಚಾಗಲು ಎಲ್ಲ ಪ್ರಯತ್ನವನ್ನೂ ನಡೆಸಿದಳು. ಶಾಮುಲೆಯೂ ಇಂಟರ್‌ಮೀಡಿಯೇಟ್ ತನಕ ಮಣ್ಣು ಹೊತ್ತಿದುದರಿಂದ ಅವಳ ಹಾಗೂ ಕಾಂತಳ ವಿಚಾರಲಹರಿ ಒಂದೇ ದಾರಿಯಲ್ಲಿ ಹರಿಯುತ್ತಿತ್ತು.

ಚಂದ್ರ ಬಿ.ಎ ಮಾಡಿಕೊಂಡು ಮನೆಯಲ್ಲಿ ಕುಳಿತ್ತಿದ್ದ. ಎಂ.ಎಗೆ ಅವನು ಓದಬೇಕೆಂದು ಮೊದಲೇ ತೀರ್ಮಾನವಾಗಿತ್ತು. ಆದರೆ ತಂದೆ ತೀರಿಕೊಂಡದ್ದು ಅದಕ್ಕೆ ಅಡ್ಡಿ ಬಂತು. ಆ ವಿಷಯ ಶೀನಣ್ಣನಲ್ಲಿ ಪ್ರಸ್ತಾಪಿಸಿದಾಗ

"ಕಾಂತಾನೂ ಕಾಲೇಜಿನಲ್ಲಿದ್ದಾಳೆ. ನೀನೂ ಎಂ. ಎ ಸೇರಿದರೆ ಇಬ್ಬರ ಖರ್ಚು ಪೂರೈಸುವುದು ನನಗೆ ಸಾಧ್ಯವಿಲ್ಲ. ಅವಳನ್ನು ಕೇಳಿ ನೋಡು – ಅವಳು ಕಾಲೇಜು ಬಿಡಲು ಸಿದ್ಧಳಾಗಿದ್ದರೆ ನೀನು ಎಂ.ಎ ಸೇರಬಹುದು"

ಎಂದು ಹೇಳಿಬಿಟ್ಟ. ಕಾಂತಳನ್ನು ಕಾಲೇಜು ಬಿಡಿಸಿ ತಾನು ಸೇರುವುದು ಚಂದ್ರನ ಮನಸ್ಸಿಗೆ ತುಂಬ ಸಣ್ಣ ವರ್ತನೆಯಾಗಿ. ಕಂಡು ಬಂದಿತು. ಆ ಸುದ್ದಿ ಅವನು ಕಾಂತಳ ಹತ್ತಿರ ಪ್ರಸ್ತಾಪಮಾಡಲೇ ಇಲ್ಲ.

ಚಂದ್ರ ಮನೆಯಲ್ಲಿ ಸುಮ್ಮನೆ ಕುಳಿತಿರುವುದು ಎಲ್ಲರಿಗಿಂತ ಹೆಚ್ಚು ಶಾಮುಲೆಗೆ ಕಣ್ಣುಕೀಸರಾಯಿತು.

"ಅವರು ಬೆಳಿಗ್ಗೆಯಿಂದ ಸಂಜೆಯವರೆಗೆ ದುಡಿಯಬೇಕು. ಉಳಿದವರು ಕೂತು ತಿನ್ನಬೇಕು"

ಎಂದು ಹಂಗಿಸುತ್ತಿದ್ದಳು. ಶಾಮುಲೆಯ ಕುಕ್ಕುಮುಳ್ಳು ಚಂದ್ರನನ್ನು ಅರೆಜೀವ ಮಾಡುತ್ತಿತ್ತು.

ಊರಿನಲ್ಲಿ ಅಲ್ಲಲ್ಲಿ ಸಿಡುಬು ತಲೆದೋರಿತು. 'ಅಮ್ಮ ಹಾಕಿಸಿ

ಕೊಳ್ಳಿರೆಂದು' ಆರೋಗ್ಯ ಖಾತೆಯವರು ಪ್ರಚಾರಮಾಡುತ್ತಿದ್ದರು. ಒಂದು ದಿನ ಊಟಮಾಡಿ ಕುಳಿತಾಗ ಶ್ರೀನಿವಾಸಮೂರ್ತಿ ತಮ್ಮನಿಗೆ

"ಚಂದ್ರಾ, ನೀನೂ ವ್ಯಾಕ್ಸಿನೇಷನ್ ಮಾಡಿಸಿಕೊಂಡುಬಿಡಪ್ಪಾ" ಎಂದ.

"ನಾನೊಲ್ಲೆ ಅಣ್ಣಯ್ಯ."

"ಏಕೆ"

"ವ್ಯಾಕ್ಸಿನೇಷನ್ನಿನಿಂದ ಪ್ರಯೋಜನವಿಲ್ಲವೆಂದು ನನಗೆ ಮನದಟ್ಟಾಗಿದೆ."

"ಮನದಟ್ಟು ಮಾಡಿದವರು ಯಾರು?"

"ವೈದ್ಯಗುರು ದ. ಕೃ. ಭಾರದ್ವಾಜರ ಲೇಖನಗಳನ್ನು ನೀನು ನೋಡಿಲ್ಲವೇ. ಹಲವು ವಿದೇಶಿಯ ಡಾಕ್ಟರುಗಳ ಆಧಾರಕೊಟ್ಟು ವ್ಯಾಕ್ಸಿನೇಷನ್ ಅಗತ್ಯವಿಲ್ಲ, ಅದು ಹಾನಿಕರವೆಂದು ಸಾರಿದ್ದಾರೆ."

"ಅವನೊಬ್ಬ ಪಂಡಿತ........"

"ಆಲೋಪತಿ ಮಾಡಿದ ಡಾಕ್ಟರುಗಳಷ್ಟೇ ಬೃಹಸ್ಪತಿಗಳೇನು ?"

"ನಿನಗೆ ಅದೂ ಗೊತ್ತಿಲ್ಲ – ಇದೂ ಗೊತ್ತಿಲ್ಲ ಸುಮ್ಮನೆ ಹರಟುತ್ತೀ"

"ನಿಮಗೆ ಏನೂ ಗೊತ್ತಿಲ್ಲ ಎನ್ನುವಷ್ಟಾದರೂ ನನಗೆ ಗೊತ್ತಿದೆ.

"ನೀನು ಬಹಳ ತಲೆಹರಟೆ ಮಾತನಾಡುತ್ತೀ ಚಂದ್ರಾ."

"ಅಣ್ಣ ಹೇಳಿದ ಹಾಗೆ ಮಾಡು ಚಂದ್ರಣ್ಣ."

ಎಂದು ಕಾಂತಾ ದನಿಗೂಡಿದಳು.

"ನನ್ನ ಸಿಲುಬೆಗೆ ಹಾಕಿದರೂ ನಾನು ವ್ಯಾಕ್ಸಿನೇಷನ್ ಮಾಡಿಸಿಕೊಳ್ಳುವುದಿಲ್ಲ.

"ನೀನು ಸಿಡುಬುಹತ್ತಿಸಿಕೊಂಡು ಮನೆಯವರಿಗೆಲ್ಲಾ ಕೊಟ್ಟುಬಿಡು."

"ನನಗೆ ಸಿಡುಬು ಹತ್ತಿದರೆ ಬನಶಂಕರಿ ತೋಪಿನಲ್ಲಿ ಬಿದ್ದು ಪ್ರಾಣ ಬಿಡುತ್ತೇನೆ. ನಿಮಗಾರಿಗೂ ತೊಂದರೆ ಕೊಡಲ್ಲ."

"ಹೋಗಲಿ ಬಿಡೀ ಯಜಮಾನ್ರೆ. ಅವರ ಮಾತಿನಲ್ಲಿ ಅರ್ಥವಿಲ್ಲ, ಸೂತ್ರವಿಲ್ಲ."

ಎಂದು ಶಾಮಲಾ ಸೇರಿಸಿದಳು.

"ನಮ್ಮ ಮನೆಯಲ್ಲಿ ನನ್ನೊಬ್ಬನನ್ನು ಬಿಟ್ಟು ನೀವೆಲ್ಲಾ ಅರ್ಥ ತಿಳಿದು ಮಾತನಾಡುವವರು. ನಾನೇ ಒಬ್ಬ ಅವಿವೇಕಿ."

"ಇಲ್ಲ ನೀವು ತುಂಬ ಜಾಣರು, ನಾವೇ ಅವಿವೇಕಿಗಳು."

ಎಂದು ಶಾಮಲಾ ನುಡಿದು ಅಳುವುದಕ್ಕಾರಂಭಿಸಿದಳು. ಹೆಂಡತಿಯ ಕಣ್ಣಲ್ಲಿ ನೀರು ಕಂಡು ಶ್ರೀನಿವಾಸಮೂರ್ತಿ ಕೆರಳಿದ.

"ಹೋಗಲಿ ಬಿಡೇ ನೀನೇಕೆ ಕಣ್ಣೀರು ಹಾಕುತ್ತೀ. ಚಂದ್ರ ಒಂದು ಮೃಗಾಂತ ಮೊದಲಿನಿಂದಲೂ ತಿಳಿದದ್ದೇ."

"ಹೋಗಲಿ ಬಿಡಿ ಅತ್ತಿಗೆಮ್ಮ – ಚಂದ್ರಣ್ಣನ ಮಾತನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತೀರಲ್ಲಾ"

ಎಂದು ಕಾಂತ ಸಮಾಧಾನ ಮಾಡಿದಳು. ಮನೆಯ ಜನ ತನಗೆ ಕೊಟ್ಟ ಸ್ಥಾನವನ್ನು ಕಂಡು ಚಂದ್ರ ನೊಂದುಕೊಂಡ. ಶ್ರೀನಿವಾಸಮೂರ್ತಿ ಇಂಥ ಪ್ರಕರಣಗಳು ಮುಂದೆ ಆಗದಂತೆ

"ನಾಳೆ ನೀನು ವ್ಯಾಕ್ಸಿನೇಷನ್ ಮಾಡಿಸಿಕೊಂಡು ಬರದಿದ್ದರೆ ಮನೆಗೆ ಬರಬೇಕಾದ್ದಿಲ್ಲ ಚಂದ್ರಾ" ಎಂದು ಖಂಡಿತವಾಗಿ ನುಡಿದ.

ಚಂದ್ರಶೇಖರನ ತಾಳ್ಮೆ ಮುಗಿಯುತ್ತ ಬಂದಿತ್ತು. ಅಣ್ಣನ ಕೊನೆಯ ಮಾತು ಕೇಳಿ ಅವನ ತಲೆ ಕೆಟ್ಟುಹೋಯಿತು. ಇನ್ನು ಈ ಮನೆಯಲ್ಲಿ ತನಗೆ ಜಾಗವಿಲ್ಲವೆಂದು ನಿರ್ಧರಿಸಿಕೊಂಡು

"ನನ್ನ ಮನೆಬಿಟ್ಟು ಹೋಗು ಅನ್ನುವ ಅಧಿಕಾರ ನಿನಗಿಲ್ಲ ಶೀನಣ್ಣ."

"ಹಾ! ನನಗಿಲ್ಲವೇ – ಇನ್ನು ಯಾರಿಗಿದೆ."

"ಬೇಡವಾದರೆ ಬಿಟ್ಟುಹೋಗುವ ಅಧಿಕಾರ ನನಗಿದೆ."

"ನಿನ್ನ ಅಧಿಕಾರವನ್ನೇ ಚಲಾಯಿಸಿ ಬಿಟ್ಟು ಹೋಗು."

"ಅದೂ ಅಷ್ಟು ಸುಲಭವಲ್ಲ. ಅಪ್ಪ ಆಸ್ತಿಯನ್ನೆಲ್ಲಾ ನಿನಗೇ ಬಿಟ್ಟು ಹೋಗಿಲ್ಲ. ನನಗೂ ಅರ್ಧಭಾಗ ಬರಬೇಕು."

"ಕೇಳಿದೆಯೇನೇ?"

ಎಂದು ಶೀನಣ್ಣ ಕೂಗಿದ.

"ಅವರಿಗೆ ಕೊಡೋದು ಕೊಟ್ಟುಬಿಡೀಯಂದ್ರೆ. ಈ ರಾಮಾಯಣ ಹರಿದು ಹೋಗಲಿ."

"ಹರಿದು ಹೋಗಲಿ"

ಎಂದು ಚಂದ್ರಶೇಖರನೂ ದನಿಗೂಡಿಸಿದ.

ಮಾರನೆಯ ದಿವಸವೇ ಅಣ್ಣತಮ್ಮ ಲಾಯರ್ ಗುಂಡಪ್ಪನವರನ್ನು ಬರಮಾಡಿಕೊಂಡರು. ಆಸ್ತಿಪಾಸ್ತಿಯ ಲೆಕ್ಕಾಚಾರವಾಯಿತು. ಯಾವುದು ಕೊಡುವುದು, ಯಾವುದು ಬಿಡುವುದು ಎಂದು ಚರ್ಚೆಯಾಯಿತು. ಇದ್ದ ಒಂದೇ ಮನೆಯನ್ನು ಪಾಲುಮಾಡಲು ಶೀನಣ್ಣ ಬಡಪೆಟ್ಟಿಗೆ ಒಪ್ಪಲಿಲ್ಲ. ಕೊನೆಗೆ ೧೩,೦೦೦ ರೂಪಾಯಿ ನಗದು ಹಣ ಚಂದ್ರಶೇಖರನಿಗೆ ಕೊಡುವುದೆಂದೂ ಅವನು ಆಸ್ತಿಗಳೆಲ್ಲದರ ಮೇಲಣ ಅಧಿಕಾರವನ್ನು ಹಿಂದಕ್ಕೊಪ್ಪಿಸುವುದೆಂದು ಇತ್ಯರ್ಥವಾಯಿತು. ಹೆಣ್ಣುಮಕ್ಕಳ ಲಗ್ನಕ್ಕೆ ಕೆಲಭಾಗ ಆಸ್ತಿಯನ್ನು ಮೀಸಲಾಗಿಡಲಾಯಿತು. ಚಂದ್ರ ತನಗೆ ೧೦,೦೦೦ ಸಾಕೆಂದೂ ಉಳಿದ ೩,೦೦೦ ರೂ.ಗಳನ್ನು ಕುಮುದಳಿಗೆ ಕೊಡುವುದಾಗಿ ತಿಳಿಸಿದ. ಅವನ ದಾನದ ವಿಷಯ ಕೇಳಿ ಕಾಂತಾ ಕಿಡಿಕಿಡಿಯಾದಳು.

ಚಂದ್ರ ಅಂದೇ ತನ್ನ ಬಟ್ಟೆಬರೆ, ಪುಸ್ತಕಗಳನ್ನು ತೆಗೆದುಕೊಂಡು 'ಬೃಂದಾವನ ಹೊಟೆಲಿ'ಗೆ ಬಂದುಬಿಟ್ಟ. ಕಾಗದಪತ್ರಗಳು ರಿಜಿಸ್ಟರಾಗಿ ಹಣ ಕೈಗೆ ಬರುವುದಕ್ಕೆ ಒಂದು ವಾರ ಹಿಡಿಯಿತು. ಚಂದ್ರ ೩,೦೦೦ ರೂ. ಗಳನ್ನು ಮೈಸೂರು ಬ್ಯಾಂಕಿನ 'ಫಿಕ್ಸೆಡ್ ಡಿಪಾಸಿಟ್'ನಲ್ಲಿ ಹಾಕಿ ಅದರ ಬಡ್ಡಿ ವರ್ಷಕ್ಕೊಮ್ಮೆ ಕುಮುದನ ಕೈ ಸೇರುವಂತೆ ಮಾಡಿದ. ಅಲ್ಲಿಗೆ ಚಂದ್ರನಿಗೂ, ಮನೆಗೂ ಇದ್ದ ಋಣಾನುಬಂಧ ಹರಿದುಹೋದ ಹಾಗಾಯಿತು.

ಇದಕ್ಕಾಗಿ ಯಾರೂ ದುಃಖಪಡಲಿಲ್ಲ. ಶಾಮಲೆಯಂತೂ ಸಂತೋಷದಿಂದ ಉಬ್ಬಿದಳು. ಕುಮುದ ಚಂದ್ರಣ್ಣನನ್ನು ಆಗಾಗ್ಗೆ ಜ್ಞಾಪಿಸಿಕೊಳ್ಳುತ್ತಿದ್ದಳು. ಆದರೆ ಕಾಂತಕ್ಕನ ಮುಂದೆ ಅವಳು ಗಟ್ಟಿಯಾಗಿ ಚಂದ್ರಣ್ಣನ ಹೆಸರನ್ನು ಕೂಡ ಹೇಳುವಂತಿರಲಿಲ್ಲ.

ಚಂದ್ರ ಮಾಡಿದ್ದು ಕೇಳಿ ಅವನ ಗೆಳೆಯರು ಕುಪಿತರಾದರು.

"ಮನೆಮಠ ಇಲ್ಲದ ಭಿಕಾರಿಯಾದೆಯಲ್ಲೋ?" ಎಂದರು.

"ಕೆಲವರು ಒಂದೊಂದೇ ಮನೆಯನ್ನು ನೆಚ್ಚಿಕೊಂಡು ಬಾಳು

ತ್ತಾರೆ. ನನಗೆ ಜಗತ್ತೇ ಮನೆ. ಯಾರು ನನ್ನನ್ನು ಆದರಿಸುತ್ತಾರೆ ಅವರೇ ನನ್ನವರು."

"ಇದು ಹೇಳುವುದಕ್ಕೆ ಸರಿಯಾದ ಮಾತು. ಲೋಕ ಎಂಥದು ಎನ್ನುವುದು ನಿನಗಿನ್ನೂ ಗೊತ್ತಿಲ್ಲ ಚಂದ್ರಾ—"

"ನನ್ನ ಚಿಂತೆಯೇ ನನಗೆ ಹಾಸಲು ಹೊದೆಯಲು ಇರುವಾಗ ಲೋಕದ ನಡತೆ ಕಟ್ಟಿಕೊಂಡು ಏತಕ್ಕೆ ಚಿಂತಿಸಲಿ."

"ಹೋಗಲಿ – ಮುಂದೇನು ಮಾಡಬೇಕೆಂದಿರುವೆ?"

"ಸದ್ಯ – ಪ್ಯಾಸಪೋರ್ಟ್ ಕಾಯುತ್ತ ಕುಳಿತಿದ್ದೇನೆ."

"ಎಲ್ಲಿಗೆ?"

"ಲಂಡನ್ನಿಗೆ"

"ಲಂಡನ್ನಿಗೆ!"

"ಹೌದು. ಲಂಡನ್ ವಿಶ್ವವಿದ್ಯಾನಿಲಯದಲ್ಲಿ ಎಂ. ಎ. ಪರೀಕ್ಷೆಗೆ ಕೂಡಬೇಕೆಂದಿದ್ದೇನೆ."

"ಅಲ್ಲಿಗೆ ಕೈಯಲ್ಲಿರುವ ೧೦,೦೦೦ ಎಕ್ಕ ಹುಟ್ಟಹೋಗುತ್ತೆ."

"ದುಡ್ಡೂ ಉಳಿಯಬೇಕು, ವಿದ್ಯೆಯೂ ಸಾಗಬೇಕೆಂದರಾಗುತ್ತೇನಯ್ಯ."

ಇರೋ ದುಡ್ಡು ಖರ್ಚುಮಾಡಿಕೊಂಡು. ಎಂ. ಎ. ಅಂಟಿಸಿಕೊಂಡು ಬಂದರೆ ಬರುವ ಲಾಭವೇನು?"

"ಯಾವ ದೃಷ್ಟಿಯಲ್ಲಿ ನೀನು 'ಲಾಭ' ಶಬ್ದ ಉಪಯೋಗಿಸುತ್ತಿರುವುದು?"

"ನಾಳೆ ಹೊಟ್ಟೆ ಬಟ್ಟೆಗೇನು ಮಾಡುತ್ತೀ."

"ಕೆಲಸ ಹುಡುಕುವುದು."

"ಸಿಕ್ಕದಿದ್ದರೆ."

"ಲಂಡನ್ನಿನ 'ವೀರಾಸಾಮಿ' ಹೊಟೆಲಿನಲ್ಲಿ ತಾಟು ಬಟ್ಟಲು ತೊಳೆಯುವುದು."

"ನೀನು ತುಂಬ ಧೈರ್ಯಶಾಲಿ ಚಂದ್ರಾ."

ಚಂದ್ರನ ಮಾತನ್ನು ಅವನ ಗೆಳೆಯರು ಪೂರ್ತಿ ನಂಬಲ್ಲಿಲ್ಲ.

ಲಂಡನ್ ವಿಶ್ವವಿದ್ಯಾನಿಲಯಕ್ಕೆ ಹೋಗಿ ಅಲ್ಲಿ ಎಂ. ಎ., ಡಿ. ಲಿಟ್. ಮಾಡಿಬರಬೇಕೆಂದು ಅವನು ಹೇಳುತ್ತಿದ್ದುದನ್ನು ಅವರು ಆಗಾಗ್ಗೆ ಕೇಳಿದ್ದರು. ಆದರೆ ತನ್ನ ಜೀವಮಾನದ ಸಮಸ್ತ ಸಂಪತ್ತನ್ನೂ ಅದಕ್ಕೆ ನಿವೇದಿಸುವಷ್ಟು ಮೂರ್ಖನಲ್ಲ ಎಂದು ತರ್ಕಿಸಿದರು.

ಅವರ ತರ್ಕ ಸುಳ್ಳಾಯಿತು. ಚಂದ್ರ ತನ್ನ ಪ್ಯಾಸ್‌ಪೋರ್ಟನ್ನು ತಂದು ತೋರಿಸಿದ. ಜತೆಯಲ್ಲಿ ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರವರ ಪತ್ರ.

"ಮರಳಿ ಬರುವೆಯೋ ಇಲ್ಲವೋ ಚಂದ್ರಾ" ಎಂದು ಕೇಳಿದರು.

"ತಾಯಿನಾಡಿಗೆ ನಾನು ಬೇಕಾಗಿಲ್ಲ. ಆದರೆ ತಾಯಿನಾಡು ನನಗೆ ಬೇಕಾಗಿದೆ. ಬಂದೇ ಬರುತ್ತೇನೆ"

ಎಂದು ಆಶ್ವಾಸನ ಕೊಟ್ಟ.

ಹೋಗುವ ಮುನ್ನ ಅಣ್ಣನ ಮನೆಗೊಮ್ಮೆ ಭೇಟಿಕೊಟ್ಟು ಅವರ 'ಅಪ್ಪಣೆ' ಪಡೆದುಕೊಂಡ. ಕುಮುದ ಚಂದ್ರಣ್ಣನನ್ನು ಅಪ್ಪಿ ಅತ್ತಳು. ಆ ಅನಾಥ ಮಗುವನ್ನು ನೋಡಿ ಚಂದ್ರನ ಕರುಳು 'ಚುರ್' ಎಂದಿತು.

"ಕಾಗದ ಬರೆಯುತ್ತೀಯಾ ಚಂದ್ರಣ್ಣ."

"ತಪ್ಪದೆ ಬರೆಯುತ್ತೇನೆ—ನೀನು."

"ನಾನೂ ಬರೆಯುತ್ತೇನೆ."

"ನೀನು ಹಿಂದಿರುಗಿದ ಮೇಲೆ ನಾನು ನಿನ್ನ ಜತೆಯಲ್ಲಿಯೇ ಇರುತ್ತೇನೆ ಚಂದ್ರಣ್ಣ."

"ಹಾಗೇ ಮಾಡುವೆಯಂತೆ."

"ನನ್ನ ಮೇಲೆ ಕೋಪವಿಲ್ಲವಷ್ಟೆ."

"ನೀನು ನನ್ನ ಮುದ್ದು ತಂಗಿ ಕುಮುದಾ – ಕೋಪವೇಕೆ?"

"ಹೊರಟೇಹೋಗುತ್ತೀಯಾ – ಅಣ್ಣ"

"ಹೋದರೆ – ತಿರುಗಿ ಬರುವುದಿಲ್ಲವೆ?"

ಎಂದು ಸಮಾಧಾನ ಹೇಳಿದ.

"ಇನ್ನು ಲಂಡನ್ನಿಗೆ ಬೇರೆ ಹೊರಟಿದ್ದಾನೆ. ಅಲ್ಲಿ ಕೈಯಲ್ಲಿರೋ ಕಾಸು ಖರ್ಚುಮಾಡಿಕೊಂಡು, ಬೀದಿಬೀದಿಯಲ್ಲಿ ಲಾಟರಿ ಹೊಡೆಯುವುದಕ್ಕೆ"

ಎಂದು ಶ್ರೀನಿವಾಸಮೂರ್ತಿ ಮೂದಲಿಸಿದ. ಶಾಮಲಾ

"ಹೋಗಲಿ ಬಿಡಿ. ನಾಲ್ಕು ದಿವಸ ಅವಸ್ಥೆಪಟ್ಟರೆತಾನೇ ವಿವೇಕ ಬರುತ್ತೆ. ತಂದು ಹಾಕುವುದಕ್ಕೆ ನೀವು – ಬೇಯಿಸಿಹಾಕುವುದಕ್ಕೆ ನಾನು ಇರೋವರೆಗೆ ಕಷ್ಟಸುಖ ಗೊತ್ತಾಗುವುದಿಲ್ಲ"

ಎಂದಳು.

ಚಂದ್ರಾ ಪಿ. ಅಂಡ್ ಓ. ಸ್ಟೀಮರ್ ಹತ್ತಿ ಲಂಡನ್ನಿಗೆ ಹೊರಟ. ಮೊದಲೇ ನಿಶ್ಚಯಮಾಡಿದ್ದಂತೆ ವೈ.ಯಂ.ಸಿ.ಎ.ಯಲ್ಲಿರುತ್ತಿದ್ದ. ವೈ.ಯಂ. ಸಿ.ಎ.ಯಲ್ಲಿ ಬಹಳ ಮಂದಿ ಹಿಂದೀ ವಿದ್ಯಾರ್ಥಿಗಳಿರುತ್ತಿದ್ದುದರಿಂದ ಚಂದ್ರನಿಗೆ ಭಾರತ ಬಿಟ್ಟು ಬಂದಿರುವುದು ಬೇಗನೆ ಗಮನಕ್ಕೆ ಬರಲಿಲ್ಲ.

ಕಾಲೇಜು ಸೇರಿದ್ದು ಆಯಿತು. ಪ್ರೊ. ಡೌಡನ್ ಅವರ ಕೈಕೆಳಗೆ ಚಂದ್ರ ಅಭ್ಯಾಸಮಾಡಬೇಕಾಗಿತ್ತು. ಪಠ್ಯ ಪುಸ್ತಕಗಳು – ಆಧಾರ ಗ್ರಂಥಗಳ ಒಂದು ಪಟ್ಟಿಯನ್ನೇ ಪ್ರೊಫೆಸರ್ ಕೊಟ್ಟರು. ಗ್ರಂಥಗಳನ್ನು ದೊರಕಿಸುವುದು, ಅವುಗಳ ಸಾರಸಂಗ್ರಹ ಬರೆದಿಡುವುದು ಮೊದಲಾದ ಕೆಲಸಗಳಲ್ಲಿ ಹೊತ್ತುಹೋಗುತ್ತಿದ್ದುದು ಗೊತ್ತೇ ಆಗುತ್ತಿರಲಿಲ್ಲ.

ಕಾಲೇಜಿನಲ್ಲಿ ಚಂದ್ರನಿಗೆ ಹೊಸ ಹೊಸ ಪರಿಚಯಗಳಾಗುತ್ತ ಬಂದವು. ಕೇಶವ ಪಿ.ಎಚ್.ಡಿ. ಥೀಸಿಸ್ ಸಿದ್ಧಮಾಡುತ್ತಿದ್ದ. ಅವನೂ ಮೈಸೂರಿನವನು ಎಂದು ತಿಳಿದಮೇಲೆ ಪರಿಚಯ ಸ್ನೇಹವಾಗಲು ಬಹಳ ದಿನ ಹಿಡಿಯಲಿಲ್ಲ.

ಕೇಶವ ಒಂದು ದಿನ ಚಂದ್ರನನ್ನು ಸೋಹೋದಲ್ಲಿದ್ದ ತನ್ನ ಮನೆಗೆ ಕರೆದೊಯ್ದ. ಎರಡು ಅಂತಸ್ತಿನ ಕಟ್ಟಡ. ನಾಲ್ಕು ನಾಲ್ಕರಂತೆ ಮೂರು ಸಾಲು ಫ್ಲ್ಯಾಟ್‌ಗಳಿದ್ದವು. ಮನೆಯ ಯಜಮಾನಿ ಮೇಲಿನ ಅಂತಸ್ಥಿನ ಒಂದು ಫ್ಲ್ಯಾಟ್‌ನಲ್ಲಿ ವಾಸಿಸುತ್ತಿದ್ದಳು.

ಕೇಶವನ ಕೋಣೆಯ ಅಂದ ಚಂದ, ಅನುಕೂಲ ಸೌಕರ್ಯಗಳನ್ನು ಕಂಡು ಚಂದ್ರನ ಬಾಯಲ್ಲಿ ನೀರೂರಿತು.

"ಇಲ್ಲಿ ರೂಮು ಸಿಕ್ಕುತ್ತದೆಯೋ ನೋಡಿ ಕೇಶವ್. ಸ್ಥಳ ಒಳ್ಳೇ ಪ್ರಶಾಂತವಾಗಿದೆ. ನನಗೆ ಅಭ್ಯಾಸಕ್ಕೆ ಅನುಕೂಲವಾಗುತ್ತದೆ."

"ಲಂಡನ್ನಿನಲ್ಲಿ ಸ್ಥಳದ್ದೇ ಗಂಡಾಂತರ ಚಂದ್ರಾ. ನಾನು ಇನ್ನು

ತಿಂಗಳೆರಡು ತಿಂಗಳಲ್ಲಿ ಥೀಸಿಸ್ ಮುಗಿಸಿ ಊರಿಗೆ ಹೊರಡುತ್ತೇನೆ. ಅನಂತರ ನೀವು ಇಲ್ಲೇ ಬಂದು ಬಿಡಿ."

"ಮನೆಯ ಯಜಮಾನಿತಿ ಒಳ್ಳೆಯವಳೇ ?"

"ಆಕೆಯ ಪರಿಚಯ ಮಾಡಿಸುತ್ತೇನೆ ಬನ್ನಿ"

ಎಂದು ಕರೆದುಕೊಂಡು ಹೋದ. ಯಜಮಾನಿತಿಯ ಫ್ಲ್ಯಾಟು ಯಾವ ಸಂಪತ್ತನ್ನೂ ಪ್ರದರ್ಶಿಸುತ್ತಿರಲಿಲ್ಲ. ಲಂಡನ್ನಿನ ಸಾಮಾನ್ಯ ಮಧ್ಯಮವರ್ಗದವರ ಮನೆ. ಗೋಡೆಯ ಮೇಲೆ ನಾಲ್ಕು ಪ್ರಕೃತಿನೋಟ ಗಳು, ಯೇಸುವಿನ ಒಂದು ಚಿತ್ರ—ಮನೆಯ ಯಜಮಾನನ ಒಂದು ದೊಡ್ಡ ಚಿತ್ರ. ಅಲ್ಲಿದ್ದ ಭಾರಿ ಸಾಮಾನೆಂದರೆ ಒಂದು ಪಿಯಾನೋ,

"ಮೆಡಾಂ" ಎಂದು ಕೇಶವ ಕೂಗುತ್ತಲೆ ಮನೆ ಯಜಮಾನಿತಿ ಅಡಿಗೆಯ ಮನೆಯಿಂದ ತನ್ನ ಏಪ್ರಿನ್ ಬಿಚ್ಚುತ್ತಾ ಬಂದಳು.

"ಮೆಡಾಂ ಓಷಿ—ಈ ಮನೆ ಮಾಲೀಕಳು."

"ಇವರು ನನ್ನ ಗೆಳೆಯ ಚಂದ್ರಶೇಖರ್–ನನ್ನೂರಿನಿಂದ ಬಂದಿದ್ದಾರೆ. ಇಲ್ಲಿ ಕಾಲೇಜು ಸೇರಿದ್ದಾರೆ."

"ಲಂಡನ್ನಿಗೆ ಸ್ವಾಗತ"

ಎಂದು ಕೈಲುಕಿಸಿ, ಇಬ್ಬರನ್ನೂ ಕೂಡಿಸಿ

"ಥಂಡಿ ಬಹಳ–ಒಂದು ಕಪ್ ಚಹಾ ತೆಗೆದುಕೊಳ್ಳಿ"

ಎಂದು ಚಹಾ ಮಾಡಿ ತರಲಿಕ್ಕೆ ಹೋದಳು,

"ಈಕೆ ಐರಿಷ್ ಹಾಗೆ ಕಾಣುತ್ತಾಳೆ."

"ಹೌದು."

"ಭಾರತೀಯರೆಂದರೆ ತಿರಸ್ಕಾರವಿಲ್ಲವಷ್ಟೇ ?"

"ತುಂಬ ಅಭಿಮಾನವಿದೆ. ಗ್ಯಾಂಡಿನಾಡಿನ ಜನ ಎಂದು ನನ್ನನ್ನು ಕರೆಯುತ್ತಾಳೆ. ಒಳ್ಳೇ ಜೀವ."

"ಬಾಡಿಗೆ–ಊಟಕ್ಕೇನು ಕೇಳುತ್ತಾಳೆ."

"ವಾರಕ್ಕೆ ೩೫ ಷಿಲ್ಲಿಂಗ್ (ಸುಮಾರು ೨೬–೨೭ ರೂಪಾಯಿ)"

"ಬಹಳವೇನಿಲ್ಲ."

"ಇತರರಿಂದ ಹೆಚ್ಚು ತೆಗೆದುಕೊಳ್ಳುತ್ತಾಳೆ–ಭಾರತೀಯ ವಿದ್ಯಾರ್ಥಿಗಳಿಗೆ ಸ್ವಲ್ಪ ರಿಯಾಯಿತಿ ತೋರಿಸುತ್ತಾಳೆ."

ಮೆದಾಂ ಚಹಾ ತಂದುಕೊಟ್ಟಳು. ಜತೆಯಲ್ಲಿಯೇ ಮನೆಯಲ್ಲಿ ಮಾಡಿದ ಬಿಸ್ಕತ್ತುಗಳನ್ನೂ ತಂದಿತ್ತಳು.

"ಮೆದಾಂ-ನಾನು ನವೆಂಬರ್ ತಿಂಗಳಲ್ಲಿ ಊರಿಗೆ ಹಿಂದಿರುಗುತ್ತೇನೆ."

"ಏಕೆ? ಮಿ. ಕೇಶವ್–ಕ್ರಿಸ್‌ಮಸ್ ಹಬ್ಬ ಮುಗಿಸಿಕೊಂಡು ಹೋಗಬಾರದೇ"

"ತಂದೆ ಬೇಗಬಾರೆಂದು ಒತ್ತಾಯ ಮಾಡುತ್ತಿದ್ದಾರೆ."

"ದೇವರು ಒಳ್ಳೆಯದು ಮಾಡಲಿ."

"ನಾನು ಹೋದ ಮೇಲೆ ಇವರು ನನ್ನ ರೂಮಿಗೆ ಬರುತ್ತಾರೆ. ಆಗಬಹುದಷ್ಟೇ?"

"ನಿಮ್ಮ ಗೆಳೆಯರು ನಮ್ಮ ಗೆಳೆಯರೇ– ಸಂತೋಷ. ಬರಲಿ."

"ಇವರು ಲಂಡನ್ನಿಗೆ ಬಂದು ಕೆಲವೇ ದಿವಸಗಳಾದವು. ನಡತೆಯಲ್ಲಿ ಮಾತಿನಲ್ಲಿ ಹೆಚ್ಚು ಕಡಿಮೆಯಾದರೆ ನೀವು ಕ್ಷಮಿಸಬೇಕು."

"ಭಾರತೀಯರು ನಿಮ್ಮ ನಡತೆಯಲ್ಲಿ ಹೆಚ್ಚುಕಡಿಮೆಯೇ? ಸಭ್ಯತೆ ನಿಮ್ಮ ಹುಟ್ಟುಗುಣ."

ಎಂದಳು. ಮೆದಾಮಳ ಉದಾರ ದೃಷ್ಟಿಯನ್ನು ನೋಡಿ ಚಂದ್ರ ಧೈರ್ಯಗೊಂಡ.

ಕೇಶವ ನಿಶ್ಚಯಿಸಿದ್ದಂತೆ ಅವನು ನವೆಂಬರ್ ತಿಂಗಳಲ್ಲಿ ತಾಯಿನಾಡಿಗೆ ಮರಳಿದ. ಅವನ ಕೋಣೆಯಲ್ಲಿ ಚಂದ್ರಾ ಬಂದು ನೆಲಸಿದ.

ಓಷಿ ಮನೆ ಬಾಡಿಗೆಗೆ ಕೊಟ್ಟಿದ್ದಂತೆ, ಕೆಲವು ಜನ ಬಾಡಿಗೆದಾರರಿಗೆ ಊಟಕ್ಕೂ ಇಡುತ್ತಿದ್ದಳು. ಆಕೆಯ ಮೇಜಿನ ಮುಂದೆ ಕೂಡುತ್ತಿದ್ದ ಹಂಗೆರಿ ದೇಶದ ಹಾಫ್‌ಮನ್ ಡೆನ್‌ಹಂ ಚಲನಚಿತ್ರ ಸ್ಟೂಡಿಯೋನಲ್ಲಿ ಪಿಟೀಲು ವಾದ್ಯಗಾರನಾಗಿದ್ದ. ಚೀಣಾದೇಶದ ಟೌನ್‌ಷಾನ್ ರೇಷ್ಮೆ ವ್ಯವಸಾಯದ ಬಗ್ಗೆ ಕೆಲವು ಸಂಶೋಧನೆಗಳನ್ನು ಮಾಡಲು ಲಂಡನ್ನಿಗೆ ಬಂದಿದ್ದ. ಇವರಲ್ಲದೆ ರೇಡಿಯೋ ಶಿಕ್ಷಣಕ್ಕೆ ಬಂದಿದ್ದ. ನಳನೀಕಾಂತ ಬೋಸ್, ಚಿತ್ರಕಲೆ – ಕಲಿಯಲು ಬಂದಿದ್ದ ಬರೂಚಾ

ಇವರೂ ಇದ್ದರು. ಓಷಿ ಮನೆ ಒಂದು 'ಅಂತರ-ರಾಷ್ಟ್ರೀಯ ವಸತಿ ಗೃಹ' ವಾಗಿತ್ತು. ಎಲ್ಲರೂ ಒಂದು ನಿಯಮಿತ ಕಾಲದಲ್ಲಿ ಊಟಕ್ಕೆ ಸೇರಬೇಕೆಂದು ನಿಯಮವಿದ್ದರೂ, ಓಷಿ ಅವರವರ ಅನುಕೂಲ ನೋಡಿ ಬಡಿಸಿ ಕಳುಹಿಸುತ್ತಿದ್ದಳು. ಭಾನುವಾರಕ್ಕೊಮ್ಮೆ ಮಾತ್ರ ಎಲ್ಲರೂ ಒಟ್ಟಿಗೆ ಸೇರಲು ಸಾಧ್ಯವಾಗುತ್ತಿತ್ತು.

ಊಟದ ಸಮಯದಲ್ಲಿ ಸ್ವಾರಸ್ಯವಾದ ಮಾತುಕತೆಯಾಗುತ್ತಿತ್ತು. ರಾಜಕೀಯ, ಸಂಗೀತ, ಚಿತ್ರಕಲೆ, ದೇಶಗಳ ವರ್ಣನೆ, ಆಯಾದೇಶದ ಮಹಾಪುರುಷರ ಬಗ್ಗೆ ಮಾತುಕತೆಯಾಗುತ್ತಿತ್ತು. ಬೋಸ್ ಮಾತಾಳಿ. ಎಲ್ಲರಿಗಿಂತಲೂ ಹೆಚ್ಚು ಮಾತನಾಡುವುದು ಅವನಿಗೆ ಪ್ರಿಯ. ಬರೂಚಾ ಹಾಫ್‌ಮನ್ ಇತರರ ಮಾತು ಕೇಳಿ ಸಂತೋಷಪಡುವುದರಲ್ಲಿ ಆಸಕ್ತರು. ಟಾನ್‌ಷಾನ್ ಆಗಾಗ್ಗೆ ಲೋಟ್ಸೆ, ಕನ್‌ಫ್ಯೂಷಿಯಸ್ ಉದಹರಿಸಿ ಸಾರಸ್ಯವಾಗಿ ಮಾತನಾಡುತ್ತಿದ್ದ. ಬೋಸ್ ಆಗಾಗ್ಗೆ ಸೌಜನ್ಯಮೀರಿ ಚೀನಾ, ಬ್ರಿಟನ್ ಮೇಲೆ ಟೀಕೆ ಮಾಡುತ್ತಿದ್ದರೂ ಇತರರು ಅದನ್ನು ಲಘುವಾಗಿ ಕಾಣುತ್ತಿದ್ದರು. ಪರಸ್ಪರ ವೈಮನಸ್ಯ ಬೆಳೆಯದಂತೆ ಓಷಿ ಬಹಳ ಎಚ್ಚರವಾಗಿರುತ್ತಿದ್ದಳು.

ಒಂದು ದಿನ ಮಾತು ವಿಕೋಪಕ್ಕೆ ಹೋಯಿತು. ಬೋಸ್ ಚಾಂಗ್ ಕೈಷೇಕರ ನಡವಳಿಕೆಯನ್ನು ಕುರಿತು ಉಗ್ರವಾಗಿ ಟೀಕಿಸಿದ. ಟಾನ್‌ಷಾನನನ್ನು ಲಂಡನ್ನಿಗೆ ಕಳುಹಿಸಿದ್ದವರು ಕೋಮಿಂಗ್‌ಟಾಂಗ್ ಪಕ್ಷದವರು. ತನ್ನ ಪಕ್ಷ—ಪಕ್ಷ ನಾಯಕ ಚಾಂಗರನ್ನು ಎತ್ತಿ ಹಿಡಿದು ಟಾನ್ ಬೋಸಿಗೆ ಉತ್ತರವಿತ್ತ. ಬೋಸ್ ಸ್ವಯಂ ಕಮ್ಯುನಿಸ್ಟ್. ಅವನ ಒಲವು ಕಮ್ಯುನಿಸ್ಟ ಪಕ್ಷದ ಕಡೆಗಿತ್ತು.

"ಒಂದಲ್ಲ ಒಂದು ದಿನ ಮೋತ್ಸೆಯ ಜೋಡು ಒರಸಬೇಕಾಗುತ್ತದೆ ನಿಮ್ಮ ಚಾಂಗ್" ಎಂದು ಬೋಸ್ ಉಗ್ರವಾಗಿ ಟೀಕಿಸಿದ

ಟಾನ್, ವ್ಯಂಗ್ಯವಾಗಿ ನಗುತ್ತಾ

"ವಾದದಲ್ಲಿ ಆವೇಶ ತೋರಿಸುವುದು, ತಮಗೆ ತಿಳಿಯದ ವಿಷಯದ ಬಗ್ಗೆ ಉಗ್ರ ಟೀಕೆಮಾಡುವುದು ಕುಜನ್ಮದ ಕುರುಹು" ಎಂದ.

" ಯಾರನ್ನು ಕುಜರೆನ್ನುತ್ತೀ ಟಾನ್–ಕಪ್ಪೆ ಜಿರಳೆ ತಿನ್ನುವ ನೀವೋ ನಾವೋ ? " ಎಂದು ಬೋಸ್ ಮತ್ತಷ್ಟು ಕೆರಳಿದ.

" ನಿಮ್ಮಂಥ ಕುಪುತ್ರರು ಹುಟ್ಟಿರುವುದರಿಂದಲೇ ಭಾರತವಿನ್ನೂ ದಾಸ್ಯದಲ್ಲಿದೆ "

ಎಂದು ಟಾನ್ ಪ್ರತ್ಯುತ್ತರವಿತ್ತ. ಬೋಸ್ ರುದ್ರರೂಪವನ್ನು ಧರಿಸಿ

" ನೀನೂ–ನಿನ್ನ ಜನ ಎಲ್ಲಾ ರೂಕ್ಷರು "

ಎಂದು ಒದರಿ ಹೊರಟುಹೋದ. ಚಂದ್ರನಿಗೆ ಬೋಸನ ನಡತೆ ಕಂಡು ಹೇಸಿಗೆಯಾಯಿತು. ಟಾನನ್ನು ನೋಡಿ

" ಟಾನ್ ನನ್ನ ದೇಶೀಯನನ್ನು ಕ್ಷಮಿಸು. ಅವನ ಅಪರಾಧಕ್ಕೆ ನಾನು ನಿಮ್ಮ ಕ್ಷಮೆ ಬೇಡುತ್ತೇನೆ. "

ಟಾನ್ ಪರಮ ಸಂತುಷ್ಟನಾದ. ಓಷಿ ಚಂದ್ರನ ಸೌಜನ್ಯ ಕಂಡು ಬೆರಗಾದಳು. ಬರೂಚಾ ಅಭಿಮಾನದಿಂದ

" ಚಂದ್ರಶೇಖರ್–ನೀವು ಭಾರತದ ರಾಯಭಾರಿಗಳು. ನಮ್ಮ ಬೋಸ್‌ನಂಥವರು ಮಾಡುವ ಅವಿವೇಕ ಮುಚ್ಚುವುದು ನಿಮ್ಮ ಹಿರಿಯ ಗುಣ"

ಎಂದು ಹೇಳಿದ.

ಓಷಿ ಮನಸ್ಸಿನಲ್ಲಿ ಚಂದ್ರನ ಬಗ್ಗೆ ತುಂಬ ಗೌರವ ಮೂಡಿತು. ಆಕೆಯನ್ನು ಕಂಡರೆ ಚಂದ್ರ ಅಭಿಮಾನಪಡುತ್ತಿದ್ದ. ಒಂದು ದಿನ ಹೇಳಿದ.

" ಮೆದಾಂ–ಒಮ್ಮೆ ನನ್ನನ್ನು ನಿಮ್ಮ ಐರ್ಲೆಂಡಿಗೆ ಕರೆದುಕೊಂಡು ಹೋಗುವುದಿಲ್ಲವೇ ? "

" ಅದೇನು ? "

" ಐರ್ಲೆಂಡಿನ ಇಬ್ಬರು ಮಹಾ ಶಿಲ್ಪಿಗಳು ಡಿ ವಲೇರಾ ಮತ್ತು ಡಬ್ಲ್ಯೂ. ಬಿ. ಯೀಟ್ಸರನ್ನು ಕಾಣಬೇಕೆಂದು ಹಂಬಲ. "

" ಯೀಟ್ಸರ ಕವಿತೆ ನಿಮಗೆ ಅಷ್ಟು ಮೆಚ್ಚೇ. "

" ಭಾರತ ಮತ್ತು ಐರ್ಲೆಂಡ್ ಬೇರೆ ಅಲ್ಲ. ರವೀಂದ್ರ, ಯೀಟ್ಸರ ಕಾವ್ಯಗಳು ಒಬ್ಬರೇ ಬರೆದವೋ ಎಂಬಂತೆ ನನಗೆ ತೋರುತ್ತದೆ. "

“ ನೀವು ಸೌಂದರ್ಯೋಪಾಸಕರು. ನಿಮಗೆ ಸುಂದರವಾದುದೆಲ್ಲಾ ಪ್ರಿಯವಾಗುತ್ತದೆ. ”

“ ಹೌದು–ಹಾಫ್ ನುಡಿಸುವ ಬೀತೋವನ್ನನ ಗೀತೆಗಳು, ಟಾನ್ ಹೇಳುವ ಲೋಟ್ಸ್ ಮಾತು, ಬರೂಚಾ ಪಾರಾಯಣ ಮಾಡುವ ಅವೆಸ್ತಾ ಎಲ್ಲಾ ಒಂದೇ ಎಂದು ನನಗೆ ಭಾಸವಾಗುತ್ತದೆ. ‘ ಜಗತ್ತಿನಲ್ಲಿರುವ ಸತ್ಯ, ಸುಂದರ, ಶಕ್ತಿಗಳ ವಿವಿಧ ಆವಿರ್ಭಾವಗಳೆಲ್ಲಾ ನನ್ನ ಅಂಶವೆಂದು ತಿಳಿ ’ ಎಂದು ಭಗವಂತ ಗೀತೆಯಲ್ಲಿ ಉಪದೇಶ ಮಾಡಿದ್ದಾನೆ. ”

“ ಎಂಥ ಉದಾತ್ತ ಸಂದೇಶ. ಮಿ-ಚಂದ್ರಾ, ನನಗೆ ಯಾವಾಗಲಾದರೂ ಗೀತೆಯನ್ನು ಓದಿ ಹೇಳುತ್ತೀರಾ. ”

“ ಪರಮ ಸಂತೋಷದಿಂದ. ಅದಕ್ಕಿಂತಲೂ ಪ್ರಿಯವಾದ ಕೆಲಸ ಇನ್ನು ಯಾವದಿದೆ ? ”

ಎಂದ. ಓಷಿಗೆ ಮಾತುಗೊಟ್ಟುದು ಸಾರ್ಥಕವಾಯಿತು. ಆಕೆ ಮನೆಗೆಲಸದಲ್ಲಿ ನಿರತಳಾಗಿದ್ದಾಗ ಚಂದ್ರಾ ಒಂದೊಂದು ಗೀತಾ ಶ್ಲೋಕ ಓದಿ ಅರ್ಥ ವಿವರಿಸುತ್ತಿದ್ದ. ಓಷಿ ಅದನ್ನು ಬೈಬಲ್ಲಿಗೆ ಹೋಲಿಸಿ ಚರ್ಚೆ ಮಾಡುತ್ತಿದ್ದಳು.

ಕಾಲಕ್ರಮೇಣ ಓಷಿಗೂ ಚಂದ್ರನಿಗೂ ವಿಶೇಷ ವಿಶ್ವಾಸ ಬೆಳೆಯಿತು. ತಾನು ಒಂದು ಊಟದ ಹೊಟೆಲಿನಲ್ಲಿದ್ದೇನೆಂಬ ಭಾವನೆ ಅವನಲ್ಲಿ ಅಳಸಿ ಹೋಗುತ್ತಾ ಬಂತು. ಒಂದು ದಿನ ತನ್ನ ಕಥೆಯನ್ನು ಸಾದ್ಯಂತವಾಗಿ ನಿರೂಪಿಸಿದ- ಓಷಿ ಕಂಬನಿಗೆರೆದು “ ಅಯ್ಯೋ ಪಾಪ- (Poor Boy) ” ಎಂದಳು.

ಕ್ರಿಸ್‌ಮಸ್ ಹಬ್ಬ ಸಮಿಾಪಿಸಿತು. ಓಷಿಗೆ ಬಿಡುವೇ ಇಲ್ಲ. ಮನೆಯನ್ನು ಅಲಂಕರಿಸುವುದು, ಕ್ರಿಸ್‌ಮಸ್ ಮಿಠಾಯಿ ಸಿದ್ಧಗೊಳಿಸುವುದು, ಇಷ್ಟ ಮಿತ್ರರಿಗೆ ಕ್ರಿಸ್‌ಮಸ್ ಕಾರ್ಡು ಕಳುಹಿಸುವುದರಲ್ಲಿ ಓಷಿ ದಣಿದುಹೋಗುತ್ತಿದ್ದಳು.

“ ಸುಮ್ಮನೆ ಏಕೆ ಎಷ್ಟು ದಣಿವು ಮಾಡಿಕೊಳ್ಳುತ್ತೀರಿ. ಸ್ವಲ್ಪ ವಿಶ್ರಮಿಸಿಕೊಳ್ಳಿ ”

ಎಂದು ಚಂದ್ರ ಆಕೆಯ ಕೈಯಿಂದ ಕೆಲಸ ಕಿತ್ತುಕೊಂಡು ತಾನೇ

ನಿರ್ವಹಿಸುತ್ತಿದ್ದ. ಓಷಿ ಅವನನ್ನು ಪ್ರೀತಿ ಹೆಮ್ಮೆಗಳಿಂದ ನೋಡುತ್ತಾ 'ಸೊಗಸಾದ ಹುಡುಗ (Fine Boy!),' ಎನ್ನುತ್ತಿದ್ದಳು.

ಹಬ್ಬದ ಹಿಂದಿನ ದಿನ ಕೆಲವು ಸಾಮಾನು ಕೊಂಡು ಬರಲು ಚಂದ್ರ ಪೇಟೆಗೆಹೋಗಿದ್ದ. ಊಟಕ್ಕೆ ಕುಳಿತಾಗ ಒಬ್ಬ ಹೊಸ ಅತಿಥಿ ಬಂದಿರುವುದು ಕಾಣಬಂತು. ಓಷಿ ಅತಿಥಿಯನ್ನು ಪರಿಚಯ ಮಾಡಿಕೊಟ್ಟಳು.

"ನನ್ನ ಮಗಳು-ಫ್ಲೋರಾ...."

ಊಟ ಮುಗಿದ ಮೇಲೆ ಎಲ್ಲರೂ ಕಾಫಿ ಸ್ವೀಕರಿಸಿ ತಮ್ಮ ತಮ್ಮ ಕೋಣೆಗೆ ಹೊರಟರು. ಚಂದ್ರನೂ ಹೊರಟಾಗ ಫ್ಲೋರಾ ಬಂದು

"ಇಂದೇನು ಅಷ್ಟು ಅವಸರ" ಎಂದಳು

"ಏಕೆ?"

"ನಿಲ್ಲಿ-ಸ್ವಲ್ಪ ಹರಟೆಹೊಡೆಯೋಣ."

"ಆಗಬಹುದು."

"ಮಮ್ಮಿ ಇಷ್ಟು ಹೊತ್ತೂ ನಿಮ್ಮ ವಿಷಯವನ್ನೇ ಹೇಳುತ್ತಿದ್ದಳು. 'ಈಗ ನನಗೆ ಮಗ ಇಲ್ಲ' ಎನ್ನುವ ಯೋಚನೆ ತಪ್ಪಿತು ಎಂದು ಹೇಳಿದಳು. ಮಮ್ಮಿಗೆ ನೀವು ಮಾಡಿರುವ ಉಪಕಾರಕ್ಕೆ ನನ್ನ ಧನ್ಯವಾದಗಳು"

"ಮಿಸ್ ಫ್ಲೋರಾ-ಉಪಕಾರಕ್ಕೆ ಋಣಿಯಾಗಿರಬೇಕಾದವನು ನಾನು. ಮನೆಯಿಲ್ಲದೆ-ನನ್ನವರಿಲ್ಲದೆ ನಾನಿಲ್ಲಿಗೆ ಭಿಕಾರಿಯಂತೆ ಬಂದೆ. ನಿಮ್ಮ ತಾಯಿ ನನ್ನ ತಾಯಿಯಾದರು. ಆ ಮಾತು ಹೋಗಲಿ. ನಿಮ್ಮ ವಿಷಯ ಹೇಳಿ-ನೀವು ಏನು ಮಾಡುತ್ತಿರುವಿರಿ."

"ಹೆಣ್ಣು ಮಕ್ಕಳ ಟ್ರೇನಿಂಗ್ ಕಾಲೇಜಿನಲ್ಲಿದ್ದೇನೆ. ಮುಂದಿನ ವರ್ಷಕ್ಕೆ ನನ್ನ ಕೋರ್ಸ್ ಮುಗಿಯುತ್ತದೆ."

"ಮುಂದೆ ಶಿಕ್ಷಕರಾಗಬೇಕೆಂದು ಇಚ್ಛೆಯೇ?"

"ಹೂ!"

"ಸಂತೋಷ."

"ನೀವು?"

"ನಾನು ಶಿಕ್ಷಕನಾಗಬೇಕೆಂದಿದ್ದೇನೆ."

" ಅದು ಬಹಳ ಉತ್ತಮ ವೃತ್ತಿ "

" ನಿಜ–ಆದರೆ ಎಲ್ಲರೂ ಪೆಸ್ಟಲೋಜಿ ಆಗುವುದು ಸಾಧ್ಯವಿಲ್ಲ."

" ಪ್ರಯತ್ನ ಮಾಡುವುದಿಲ್ಲ."

" ನನ್ನ ದೇಶಕ್ಕೆ ಬಹಳ ಪೆಸ್ಟಲೋಜಿಗಳು ಬೇಕಾಗಿದ್ದಾರೆ ಮಿಸ್."

" ಒಮ್ಮೆ ನಿಮ್ಮ ದೇಶಕ್ಕೆ ಬರಬೇಕೆಂದು ಇಷ್ಟ."

" ನೀವು ನನಗೆ ಐರ್ಲೆಂಡ್ ತೋರಿಸಿ, ನಾನು ಭಾರತ ತೋರಿಸುತ್ತೇನೆ."

" ಆಗಲಿ "

ಎಂದಳು. ಚಂದ್ರನ ಮನಸ್ಸು ಅವ್ಯಕ್ತಾನಂದದಲ್ಲಿ ಲೀನವಾಯಿತು.

ರಾತ್ರಿ ಹಬ್ಬದ ವೇಳೆಯಲ್ಲಿ ಚಂದ್ರಾ ಮೆಡಾಂಗೆ ಉಣ್ಣೆಯ ಶಾಲೊಂದನ್ನೂ, ಫ್ಲೋರಾಗೆ ಗಂಧದ ಮರದ ಪೆಟ್ಟಿಗೆಯೊಂದನ್ನೂ ಕ್ರಿಸ್‌ಮಸ್ ಬಹುಮಾನವಾಗಿ ಕೊಟ್ಟ. ತಾಯಿ ಮಕ್ಕಳಿಬ್ಬರೂ ಚಂದ್ರನ ವಿಶ್ವಾಸಕ್ಕೆ ಸಂತೋಷಿಸಿದರು.

ಚಂದ್ರಾ, ಫ್ಲೋರಾ ಗೆಳೆಯ ಗೆಳತಿಯರಾದರು. ಅವಳ ನಿಷ್ಕಲ್ಮಷ ಹೃದಯ, ಉನ್ನತ ವಿಚಾರಗಳನ್ನು ಕಂಡು ಚಂದ್ರ ಬೆರಗಾದ. ಕ್ರಿಸ್‌ಮಸ್ ಹಬ್ಬ ಮುಗಿಯುತ್ತ ಬಂದಿರಲು ಫ್ಲೋರಾ ಕಾಲೇಜಿಗೆ ಹೊರಟುಹೋದಳು. ಚಂದ್ರನಿಗೆ ಪ್ರಪಂಚ ರಸರಹಿತವಾಯಿತು.

ಮುಂದಿನ ಸೂಟಿಯತನಕ ಚಂದ್ರನಿಗೂ ಪುರಸತ್ತು ಸಿಗಲಿಲ್ಲ. ಕಾಲೇಜಿನ ಪಾಠಪ್ರವಚನಗಳನ್ನು ಜೀರ್ಣಿಸಿಕೊಳ್ಳುತ್ತಿದ್ದುದಲ್ಲದೆ ತನ್ನ ಪ್ರಿಯ ಕವಿಗಳ ಬಗ್ಗೆ ಹೆಚ್ಚು ವಿಷಯಸಂಗ್ರಹಮಾಡಿ ಗ್ರಂಥಗಳನ್ನು ಬರೆಯಲು ಮೊದಲುಮಾಡಿದ. ಇಂಗ್ಲೆಂಡಿನ ಸಂಸ್ಕೃತಿಯನ್ನು ಕೂಲಂಕಷವಾಗಿ ಅರಿಯಲೆತ್ನಿಸಿದ. ಆ ಜನರ ಖಂಡಿತವಾದ, ಸತ್ಯಪ್ರಿಯತೆ ಅವನನ್ನು ಮರುಳುಮಾಡಿದವು.

ಪರೀಕ್ಷೆ ಮುಗಿದ ಮಾರನೆಯ ದಿನ ಚಂದ್ರನಿಗೆ ಊರಿನಿಂದ ಕಾಗದ ಬಂತು. ಅಣ್ಣನೂ ಬರೆದಿದ್ದ – ಕುಮುದನೂ ಬರೆದಿದ್ದಳು. ಕಾಂತಳ ಲಗ್ನ ನಿಶ್ಚಯವಾಗಿತ್ತು. ಗಂಡು ಇಂಜನಿಯರ್ ಎಂದು ಗೊತ್ತಾಗಿತ್ತು.

ಚಂದ್ರ ಕೂಡಲೆ ಕಾಂತಳಿಗೆ ಕೇಬಲ್‌ಗ್ರಾಮ್ ಮಾಡಿ ಹತ್ತು ಪೌಂಡ್
ಉಡುಗೊರೆ ಕಳಿಸಿಕೊಟ್ಟ.

'ಪರೀಕ್ಷೆ ಮುಗಿಯುತ್ತಿದೆ – ನಾಲ್ಕೈದು ದಿವಸಗಳಲ್ಲಿ ಬರುತ್ತೇನೆ' ಎಂದು ಫ್ಲೋರಾ ತಾಯಿಗೂ, ಚಂದ್ರನಿಗೂ ಬರೆದಿದ್ದಳು. ಓಷಿ ಮಗಳ ಕಾಗದ ಹಿಡಿದು ಕುಳಿತಿದ್ದಳು. ಮುಖದಲ್ಲಿ ಕಳೆಯಿರಲಿಲ್ಲ. ಚಂದ್ರ ಹೋಗಿ ಪಕ್ಕದಲ್ಲಿ ಕುಳಿತು ಫ್ಲೋರಾ ತನಗೆ ಬರೆದಿದ್ದ ಕಾಗದವನ್ನು ಮೆದಾಮಿಗಿತ್ತ. ಆಕೆ ಅದನ್ನೂ ಓದಿಕೊಂಡು ನಿಟ್ಟುಸಿರುಬಿಟ್ಟಳು.

"ಏಕೆ ತಾಯಿ ನಿಟ್ಟುಸಿರು. ಫ್ಲೋರಾ ಬರುವುದನ್ನು ಕೇಳಿ ನೀವು ಸಂತೋಷ ಪಡುವುದನ್ನು ನೋಡಲು ಬಂದೆ— ಹೀಗೇಕೆ ದುಃಖಿಸುತ್ತಿರುವಿರಿ."

"ಅವಳ ಸಂತೋಷ ಮುರಿಯಬೇಕಲ್ಲಾ ಎಂದು."

"ಹಾಗಂದರೆ?"

"ನೋಡು ಸನ್ (Son) ನಮ್ಮ ಆಸ್ತಿಪಾಸ್ತಿಯೆಲ್ಲಾ ಈ ಮನೆ. ಇದರ ಬಾಡಿಗೆ, ನಾಲ್ಕು ಜನಕ್ಕೆ ಊಟಕ್ಕೆ ಹಾಕುವ ಖರ್ಚಿನಿಂದ ನಾನಿದುವರೆಗೆ ಕಾಲ ತಳ್ಳಿದ್ದೇನೆ. ಇಷ್ಟು ದಿವಸ ಫ್ಲೋರಾನನ್ನು ಹಾಸ್ಟೆಲಿನಲ್ಲಿಟ್ಟು ಓದಿಸಿದೆ. ಇನ್ನು ಅದು ನನ್ನ ಯೋಗ್ಯತೆ ಮೀರಿದ ವಿಷಯ. ಅವಳನ್ನು ಕಾಲೇಜು ಬಿಡಿಸಬೇಕಾಗಿದೆ."

"ಆದರೆ ಫ್ಲೋರಾ ತನ್ನ ಶಿಕ್ಷಣ ಮುಗಿಸುವುದರ ಬಗ್ಗೆ ತುಂಬ ಉತ್ಸುಕಳಾಗಿದ್ದಾಳೆ."

"ನಿಜ. ನಾನೇನು ಮಾಡಲಿ. ಸ್ವಲ್ಪ ಸಾಲ ಇದೆ. ಅದಿಲ್ಲದಿದ್ದರೆ ಹೇಗಾದರೂ ದುಡಿದು ಫ್ಲೋರಾ ಶಿಕ್ಷಣ ಮುಗಿಸಲು ನೆರವಾಗುತ್ತಿದ್ದೆ."

"ಆಕೆಯ ಮುಂದಿನ ಶಿಕ್ಷಣಕ್ಕೆ ಹಣ ಎಷ್ಟು ಬೇಕಾಗಬಹುದು."

"ಇನ್ನು ೧೫೦ ಪೌಂಡುಗಳಾದರೂ ಬೇಕು."

"ನಾನು ಒಂದು ಮಾತು ಹೇಳುತ್ತೇನೆ ಕೇಳುವಿರಾ?"

"ಏನು ಹೇಳಿ."

"ಆ ಹಣ ನಾನು ಕೊಟ್ಟಿರುತ್ತೇನೆ. ಫ್ಲೋರಾಗೆ ಈ ಸುದ್ದಿ ತಿಳಿಸಬೇಡಿ."

"ಛೆ! ಛೆ! ನಿಮ್ಮಿಂದ ಹಣ ತೆಗೆದುಕೊಳ್ಳಲೇ. ದೂರದೇಶದಿಂದ ಬಂದಿರುವ ನೀವು ನಾಳೆ ತೊಂದರೆಪಟ್ಟುಕೊಂಡರೆ ಇಲ್ಲಿ ನಿಮಗೆ ಆಗುವವರು ಯಾರು?"

"ನೀವು – ಭಗವಂತ. ನೋಡಿ ತಾಯಿ, ನೀವು ಈ ಹಣ ತೆಗೆದುಕೊಳ್ಳದಿದ್ದರೆ ನನಗೆ ಬಹಳ ಅಸಮಾಧಾನವಾಗುತ್ತದೆ. ನೀವು ನನ್ನ 'ಮಗು' (Son) ಎಂದು ಕರೆಯುತ್ತಿರುವುದು ಬೂಟಾಟಿಕೆ ಎಂದು ಭಾವಿಸುತ್ತೇನೆ."

"ಛೆ! ಹಾಗನ್ನಬೇಡ ಸನ್. ಬೂಟಾಟಿಕೆ ನಾನರಿಯೆ."

"ನನ್ನನ್ನು ನಿಮ್ಮ ಮನೆಯವನನ್ನಾಗಿ ಮಾಡಿಕೊಂಡಿರಿ. ಈ ಹಣವನ್ನು ನೀವು ಅಧಿಕಾರದಿಂದ ತೆಗೆದುಕೊಳ್ಳಬೇಕು."

"ಸಾಲವಾಗಿ ತೆಗೆದುಕೊಳ್ಳುತ್ತೇನೆ. ಆಗಬಹುದೋ?"

"ನಿಮ್ಮ ಇಷ್ಟ"

ಎಂದ. ಓಷಿ ಚಂದ್ರನನ್ನು ಅಪ್ಪಿ ಮುದ್ದಿಟ್ಟಳು. ಅವಳ ಕಣ್ಣುಗಳಿಂದ ಕೋಡಿ ಹರಿಯಿತು.

"ಮಗೂ – ದೇವರು ನಿನ್ನನ್ನು ಕಾಪಾಡಲಿ (God Bless you my son!)" ಎಂದಳು.

ಓಷಿ ಆಶೀರ್ವಾದ ಚಂದ್ರನ ಜೀವನದಲ್ಲಿ ಪೂರ್ಣ ಫಲಕಾರಿಯಾಯಿತು. ವಿಶ್ರಾಂತಿಯನ್ನೂ ಲಕ್ಷಿಸದೆ ಅವನು ದುಡಿಯುತ್ತಿದ್ದ. ದುಡಿಮೆ ನಿಷ್ಫಲವಾಗಿ ಹೋಗಲಿಲ್ಲ.

ಇದ್ದಕ್ಕಿದ್ದಂತೆ ಲಂಡನ್ನಿನ ಪೇಪರ್‌ಗಳಲ್ಲಿ ಪ್ರಕಟವಾದ ಒಂದು ಸುದ್ದಿ ಇಡೀ ಲಂಡನನ್ನು ಚಕಿತಗೊಳಿಸಿತು. ಡಾರಚೆಸ್ಟರ್ ಹೋಟೆಲಿನಲ್ಲಿದ್ದ ಒಬ್ಬ ಭಾರತೀಯ ರಾಜಕುಮಾರ, ಪಕ್ಕದ ಕೋಣೆಯಲ್ಲಿದ್ದ ಒಬ್ಬ ಅಮೇರಿಕನ್ ಶ್ರೀಮಂತರ ಒಡವೆಗಳನ್ನಪಹರಿಸಿ ಪರಾರಿಯಾಗಿದ್ದ. ಅವನು 'ಮಾಂಟೆಕಾರ್ಲೋ'ದಲ್ಲಿ ಅವುಗಳನ್ನು ಮಾರಿ 'ರೌಲೆಟ್' ಟೇಬಲ್ ಮುಂದೆ ದ್ಯೂತವಾಡುತ್ತ ಕುಳಿತಿದ್ದಾಗ ಪೋಲೀಸರು ಅವನನ್ನು ದಸ್ತಗಿರಿಮಾಡಿ ತಂದಿದ್ದರು. ರಾಜಕುಮಾರನ ನಡತೆಯನ್ನು ಖಂಡಿಸಿ ಚಂದ್ರಾ "ನ್ಯೂಸ್ ಕ್ರಾನಿಕಲ್" ಪತ್ರಿಕೆಗೆ ಒಂದು ಲೇಖನ ಬರೆದ.

ಅದು ಪ್ರಕಟವಾದುದಲ್ಲದೆ ಚಂದ್ರನಿಗೆ ಒಂದು ಪೌಂಡು ವರಮಾನವನ್ನೂ ತಂದಿತು.

"ನ್ಯೂಸ್ ಕ್ರಾನಿಕಲ್" ಲೇಖನನೋಡಿ ಬೋಸ್ ಪ್ರಕ್ಷುಬ್ಧನಾದ. ಊಟಕ್ಕೆ ಕುಳಿತಾಗ

"ನೀವು ಈ ಬಗೆಯ ಲೇಖನ ಬರೆಯುವುದು ದೇಶದ್ರೋಹ ಮಿ. ಚಂದ್ರಾ" ಎಂದ,

"ಲೇಖನದಲ್ಲಿ ದೇಶದ್ರೋಹವೇನಿದೆ" ಎಂದು ಬರೂಚಾ ಕೇಳಿದ.

"ಭಾರತೀಯರ ನಡತೆಯನ್ನು ಭಾರತೀಯರೇ ಖಂಡಿಸಿದರೆ ದೇಶಕ್ಕೆ ಅನ್ಯಾಯವಾಗುವುದಿಲ್ಲವೇ. ಇಲ್ಲಿರುವ ಜನ ನಮ್ಮ ಬಗ್ಗೆ ಏನು ತಿಳಿದು ಕೊಳ್ಳುತ್ತಾರೆ."

"ರಾಜಕುಮಾರನ ನಡತೆಯನ್ನು ನಾವು ಅನುಮೋದಿಸಿದರೆ ಇಲ್ಲಿನ ಜನ ಏನು ತಿಳಿದುಕೊಳ್ಳುತ್ತಾರೆ" ಎಂದು ಪ್ರಶ್ನಿಸಿದ.

"ನಾವು ಅನುಮೋದಿಸುತ್ತಿಲ್ಲ – ಸುಮ್ಮನಿರುತ್ತೇವೆ."

"ಸುಮ್ಮನಿರುವುದೂ ಒಪ್ಪಿಗೆಯ ಲಕ್ಷಣವಲ್ಲವೇ (Silence is half Consent)"

"ಏನೇ ಆದರೂ ನಮ್ಮವರ ನಡತೆ ಖಂಡಿಸುವುದು ನಮ್ಮ ಕೆಲಸವಲ್ಲ."

"ರಾಜಕುಮಾರನಂತಹ ಜನ ನಮ್ಮವರಲ್ಲ ಬೋಸ್. ಅವರು ಯಾರವರೂ ಅಲ್ಲ. ಅಂತಹ ಜನ ಸಾಂಸ್ಕೃತಿಕ ಜಗತ್ತಿನ ವಿಪರ್ಯಾಸ."

"ಅಂತರ-ರಾಷ್ಟ್ರೀಯತೆ ಎಂದುಕೊಂಡು ನೀವು ಹಿಂದೂಸ್ಥಾನದ ಪಂಚಮದಳದವರಾಗುತ್ತಿದ್ದೀರಿ."

"ಬೋಸ್. ಶಿಷ್ಟಾಚಾರ ವಿಚಾರದಂತೆ ವಾದಮಾಡುವುದು ನಿಮಗೆ ಸಾಧ್ಯವೇ ಇಲ್ಲ. ಹೋಗಲಿ ಬಿಡಿ. ನನ್ನ ನಡತೆ ನಿಮಗೆ ಒಪ್ಪಿಗೆಯಾಗ ದಿದ್ದರೆ ಆ ಬಗ್ಗೆ ಚರ್ಚೆಬೇಡ."

"ನೀವು ಹೇಳಿದ್ದು ಸತ್ಯವಾದ ಮಾತು ಮಿ. ಚಂದ್ರಾ" ಎಂದು ಹಾಫಮನ್ ಸೇರಿಸಿದ.

"ನೋಡಿ ಮಿ. ಬೋಸ್. ರಾಜಕುಮಾರನಂತಹ ಸ್ವೈರಾಚಾರಿಗಳ

ಮಾನದಂಡದಿಂದ ಭಾರತೀಯರನ್ನು ಯಾವ ವಿವೇಕಿಯೂ ಅಳೆಯಲಾರ. ಹಾಗೆ ಅಳೆಯುವುದಾದರೆ ಆಲ್ ಕೆಪೋನ್, ಡಿಲ್ಲಿಂಗರ್, ಕೂ ಕ್ಲಕ್ಸ್ ಕ್ಲ್ಯಾನ್‌ಗಳ ಮಾನದಂಡದಿಂದ ಅಮೇರಿಕೆಯನ್ನಳೆಯಬೇಕಾಗುತ್ತದೆ. ವಿವೇಕಿಯಾದ ಯಾವ ಅಮೇರಿಕನ್ ಪ್ರಜೆಯೂ ಆಲ್ ಕೆಪೋನ್, ಡಿಲ್ಲಿಂಗರ್, ಕೂ ಕ್ಲಕ್ಸ್ ಕ್ಲ್ಯಾನ್‌ಗಳ ನಡತೆಯನ್ನು ಮೆಚ್ಚುವುದಿಲ್ಲ – ಬಲವಾಗಿ ಖಂಡಿಸುತ್ತಾನೆ. ಚಂದ್ರಾ ಅವರು ಮಾಡಿದ್ದು ಇದೇ ಕೆಲಸ"

ಎಂದು ಬರೂಚಾ ಚಂದ್ರನ ಪಕ್ಷ ಹಿಡಿದು ವಾದಮಾಡಿದ. ಬೋಸ್ ತನ್ನ ಮಾತಿಗೆ ಇಲ್ಲಿ ಏನು ಬೆಲೆಯಿಲ್ಲವೆಂಬುದನ್ನರಿತು ತೆಪ್ಪಗಾದ.

ಭಾನುವಾರದ ಪತ್ರಿಕೆಗಳಿಗೆ ಚಂದ್ರಾ ಮೇಲಿಂದ ಮೇಲೆ ಲೇಖನ ಲೇಖನಗಳನ್ನು ಬರೆಯುತ್ತಿದ್ದ. ಭಾರತೀಯ ಸಂಸ್ಕೃತಿ, ಜನತೆಯ ಆಚಾರ ವ್ಯವಹಾರ, ರಾಜಕೀಯ ಸಮಸ್ಯೆ, ಸಾಮಾಜಿಕ ವಿಷಯಗಳು, ಕಲೆ, ಸಾಹಿತ್ಯಗಳ ಮೇಲೆಲ್ಲಾ ಅವನ ಲೇಖನಗಳು ಪ್ರಕಟವಾಗುತ್ತಿದ್ದವು. ಅವುಗಳನ್ನು ಭಾರತವರ್ಷದ 'ಹಿಂದೂ' 'ಅಮೃತ ಬಜಾರ್ ಪತ್ರಿಕೆ' 'ಬಾಂಬೆ ಕ್ರಾನಿಕಲ್' 'ಕರಾಚಿ ಟೈಮ್ಸ್' ಮೊದಲಾದ ಪತ್ರಿಕೆಗಳೆತ್ತಿಕೊಂಡು ಪ್ರಕಟಿಸುತ್ತಿದ್ದವು. ಅವನ ಲೇಖನಗಳಿಂದ ಸಂತುಷ್ಟರಾದ ಹಿಂದೂ, ಅಮೃತಬಜಾರ್ ಪತ್ರಿಕೆಯ ಸಂಪಾದಕರು ತಮ್ಮ ಪತ್ರಿಕೆಗಳಿಗೂ ಲೇಖನಗಳನ್ನು ಕಳುಹಿಸಬೇಕೆಂದು ಪ್ರಾರ್ಥಿಸುತ್ತಿದ್ದರು.

ಲೇಖನ ವ್ಯವಸಾಯದಿಂದ ಚಂದ್ರನಿಗೆ ಸಾಕಷ್ಟು ಹಣ ಬರುತ್ತಿತ್ತು. ಅವುಗಳ ಜತೆಗೆ ಗ್ರಂಥರಚನೆಯ ಕೆಲಸವೂ ತಡೆಯಿಲ್ಲದೆ ಸಾಗಿತ್ತು. ಚಂದ್ರ ತನ್ನ ಮೂರು ಗ್ರಂಥಗಳನ್ನು ವಿವಿಧ ಪ್ರಕಾಶಕರಿಗೆ ಕಳುಹಿಸಿಕೊಟ್ಟು ಅವರ ಉತ್ತರ ಕಾಯುತ್ತಿದ್ದ.

ಸೋಹೋ ಲಂಡನ್ನಿನ ಬಡವರ ಕೇರಿ. ಬೇರೆ ಬೇರೆ ಫ್ಯಾಕ್ಟರಿಗಳಲ್ಲಿ, ಗಿರಣಿಗಳಲ್ಲಿ ಕೆಲಸಮಾಡುವ ಜನ ಹೆಚ್ಚಾಗಿ ಅಲ್ಲಿ ವಾಸಿಸುತ್ತಿದ್ದರು. ಬ್ರಿಟಿಷ್ ಸಾಮ್ರಾಜ್ಯ ಭಾರತ ಆಫ್ರಿಕಾ ಮೊದಲಾದ ದೇಶಕೋಶಗಳನ್ನು ಕೊಳ್ಳೆಹೊಡೆದು ಅಲ್ಲಿನ ಸಂಪತ್ತನ್ನೆಲ್ಲಾ ದೋಚಿಕೊಂಡು ಬಂದಿದ್ದರೂ ಅದರ ಲಾಭ ಸೋಹೋ ಜನಗಳಿಗಾಗಿರಲಿಲ್ಲ. ಹತ್ತು ಜನ ವೆಸ್ಟ್‌ಎಂಡ್‌ನಲ್ಲಿ ಮೆರೆಯುತ್ತಿದ್ದರೆ ಸಹಸ್ರಾರು ಜನ ಈಸ್ಟ್‌ಎಂಡ್‌ನಲ್ಲಿ

ಹೊಟ್ಟೆಗಿಲ್ಲದೆ ನರಳುತ್ತಿದ್ದರು. ಮನೆಯಲ್ಲಿದ್ದ ಸಣ್ಣಮಕ್ಕಳು, ಹೆಂಗಸರು, ಗಂಡಸರು ಎಲ್ಲರೂ ದಿನಕ್ಕೆ ೮ ರಿಂದ ೧೨ ಗಂಟೆಗಳವರೆಗೆ ದುಡಿದರೂ ಎರಡು ಹೊತ್ತು ಕೂಳು ಕಾಣುವುದು ದುರ್ಲಭವಾಗುತ್ತಿತ್ತು. ಚಳಿಗಾಲ ಬಂತೆಂದರೆ ಜನಗಳ ಪಾಡು ಹೇಳತೀರದು. ಮೈ ಕೈ ಕಾಸಿಕೊಳ್ಳುವುದಕ್ಕೆ ಸಾಕಷ್ಟು ಸೌದೆ ಕೊಳ್ಳಲು ಹಣವಿಲ್ಲ; ಬೆಚ್ಚನೆಯ ಉಣ್ಣೆ ಬಟ್ಟೆ ತೊಡಲು ಹಣವಿಲ್ಲ; ದೇಹವನ್ನು ಬಿಸಿಯಾಗಿಟ್ಟಿರಲು ಅವಶ್ಯಕವಾದ ಆಹಾರ ಪಾನೀಯಗಳನ್ನು ಕೊಳ್ಳಲು ಹಣವಿಲ್ಲ. ಚಳಿಗಾಲ ಬಂತೆಂದರೆ ಜನ ಬೀದಿ ಬೀದಿಗಳಲ್ಲಿ ಸಾಯುತ್ತಿದ್ದರು.

ಸುತ್ತಮುತ್ತಲ ಪರಿಸ್ಥಿತಿಯನ್ನು ಚಂದ್ರ ನಿತ್ಯ ನೋಡುತ್ತಿದ್ದ. ಜನರ ಬಾಳಿನ ಗೋಳು ಅವನ ಅಂತಃಕರಣವನ್ನು ಕಲಕಿತ್ತು. ಅಗಾಗ್ಗೆ ಶ್ರಮ ಜೀವಿಗಳ ಮನೆಗೆ ಹೋಗಿ ಅವರ ಪರಿಚಯ ಮಾಡಿಕೊಳ್ಳುತ್ತಿದ್ದ. ಸೋಹೋ ದಲ್ಲಿರುವ ಜನರನ್ನು ಕೂಡಿಸಿ ಅವರು ಒಬ್ಬರಿಗೊಬ್ಬರು ಕಷ್ಟಕಾಲದಲ್ಲಿ ನೆರವಾಗುವಂತೆ ಮಾಡಬೇಕೆಂಬುದು ಅವನ ಉತ್ಕಟೇಚ್ಛೆಯಾಗಿತ್ತು. ಸೋಹೋ ! ಚಂದ್ರನ ಕಣ್ಣಿಗೆ ಒಂದು 'ಸಂಕ್ಷಿಪ್ತ ಭಾರತವರ್ಷ'ವಾಗಿತ್ತು.

ಕೆಲವು ತಿಂಗಳಲ್ಲಿ 'ಇಂಡಿಯನ್ ಫ್ರೆಂಡ್' ಪರಿಚಯ ಸೋಹೋದ ಜನಗಳಿಗೆಲ್ಲಾ ಆಯಿತು. ಯಾರಿಗೇನು ತೊಂದರೆ ಬಂದರೂ 'ಇಂಡಿಯನ್ ಫ್ರೆಂಡ್' ಬಳಿಗೋಡಿಬರುತ್ತಿದ್ದರು. ಚಂದ್ರನಿಗೆ ಬರುತ್ತಿದ್ದ ವರಮಾನ ಅವನ ಕೆಲಸಕಾರ್ಯಗಳಿಗೆ ಸಾಲುತ್ತಿರಲಿಲ್ಲ.

ಒಂದು ದಿನ ಕಾಹಿಲೆಯಿದ್ದ ಮಿಸೆಸ್ ಮಾರ್ಗನ್ ನೋಡಿಕೊಂಡು ಚಂದ್ರ ಮನೆಗೆ ಬಂದ. ಓಷಿ ಅವನ ಟಪಾಲು ತಂದು ಕೈಗಿತ್ತಳು. ಅದನ್ನು ಒಡೆದು ನೋಡಿ 'ಮಮ್ಮಿ' ಕೈಗಿತ್ತ. ರೂಟ್ಲೆ ಕಂಪೆನಿಯಿಂದ ಬಂದಿದ್ದ ಕಾಗದದಲ್ಲಿ ಚಂದ್ರನ ಪುಸ್ತಕ "ಷೆಲ್ಲಿ ಮತ್ತು ಭಾರತೀಯ ವಿಚಾರ" ಸ್ವೀಕೃತವಾಗಿದೆಯೆಂದು ತಿಳಿಸಲಾಗಿತ್ತು. ಓಷಿ ಕಾಗದವನ್ನು ನೋಡುತ್ತಿದ್ದಂತೆ ಆಕೆಯ ಕಣ್ಣುಗಳಿಂದ ಹನಿಗಳುದುರಿದವು.

"ಏಕೆ ಮಮ್ಮಿ—ಕಣ್ಣೀರು ಹಾಕುತ್ತೀ"

"ನನಗೆ ಅಷ್ಟು ಸಂತೋಷವಾಗಿದೆ—ಮಗೂ."

"ನಿಮ್ಮ ಮನೆಗೆ ನಾನು ಬಂದ ಹೊತ್ತು ಒಳ್ಳೆಯದು. ನಿಮ್ಮ ಆಶೀರ್ವಾದದಿಂದ ನನ್ನ ಅದೃಷ್ಟ ಅರಳಿದೆ."

"ನೀನು ದೊಡ್ಡವನು ಸನ್."

"ಮನುಷ್ಯ ನೆಪೋಲಿಯನ್‌ನಷ್ಟು ದೊಡ್ಡವನಾದರೂ ಅವನ ತಾಯಿಗೆ ಅವನು ಮಗುವೇ ಅಲ್ಲವೇ?"

"ನನ್ನ ಜೀವನ ಸಂಧ್ಯೆಯಲ್ಲಿ ಚಂದ್ರನಂತೆ ನೀನು ಮೂಡಿದೆ."

"ಮಮ್ಮಿ—ಇಂಥ ಹುಚ್ಚುಮಾತು ಆಡುವುದನ್ನು ಬಿಟ್ಟು ಬಿಡಿ. ನಾನೊಬ್ಬ ಬಡಲೇಖಕ" ಎಂದ.

ಷೆಲ್ಲಿ ಗ್ರಂಥ ಪ್ರಕಟವಾಗುವುದಕ್ಕೆ ಉಳಿದ ಗ್ರಂಥಗಳು ಕಾದಿದ್ದವೆಂದು ಕಾಣುತ್ತದೆ. ಅದು ಅಚ್ಚಾಗಿ ಹೊರಬಿದ್ದ ಕೂಡಲೆ ಚಂದ್ರನ "ಈಸ್ಟ್ ಅಂಡ್ ವೆಸ್ಟ್" ಗ್ರಂಥ ಲಾಂಗ್‌ಮೆನ್ಸ್ ಕಂಪೆನಿಯವರಿಂದ, "ಇಬ್ಸನ್ನನ ಸಮಸ್ಯೆ" ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ಸಿನವರಿಂದ, "ಹಸಿವಿನ ಯಾತ್ರೆ" ಕಾದಂಬರಿ ಸಿಲ್ವಿನ್, ಬ್ಲೌಂಟ್ ಕಂಪೆನಿಯವರಿಂದ ಪ್ರಕಟವಾದವು. 'ಹಸಿವಿನ ಯಾತ್ರೆ' ಕಾದಂಬರಿಯ ಬಗ್ಗೆ ಇ. ಎಂ. ಫಾಸ್ಟರ್, ಸ್ಟೀಫನ್ ಸ್ಪೆಂಡರ್, ಪ್ರೊಫೆಸರ್ ಸೆಲಿನ್‌ಕೋರ್ಟ್, ಎಥಿಲ್ ಮ್ಯಾನಿನ್ ಮೊದಲಾದ ಪ್ರಸಿದ್ಧ ಸಾಹಿತಿಗಳು ಉತ್ತಮ ಅಭಿಪ್ರಾಯ ವ್ಯಕ್ತಪಡಿಸಿ ಚಂದ್ರನ ಸಾಹಿತ್ಯ ಪ್ರತಿಭೆಯನ್ನು ಪ್ರಶಂಸಿಸಿದರು.

ಕೀರ್ತಿ, ಚಂದ್ರನ ನಿರೀಕ್ಷಣೆ ಮೀರಿ ದೊರೆಯಿತು. ಭಾರತ ತನ್ನ ಸುಪುತ್ರನನ್ನು ಕೊಂಡಾಡಿತು. ಭಾರತದ ಪ್ರಾಂತ್ಯಭಾಷೆಗಳು ಚಂದ್ರನ ಗ್ರಂಥಗಳನ್ನು ಅನುವಾದ ಮಾಡಿಕೊಳ್ಳಲು ಅಪ್ಪಣೆ ಬೇಡಿದವು. ಚಂದ್ರನ ಕೀರ್ತಿ ಶ್ರೀನಿವಾಸಮೂರ್ತಿಯ ತನಕ ಮುಟ್ಟಿತು. ಡಾಕ್ಟರ ಸ್ನೇಹಿತರು ಅವರ ತಮ್ಮನ ಕೀರ್ತಿಯನ್ನು ಪ್ರಶಂಸಿಸಿದರು. ತಮ್ಮ ನಿರುಪಯೋಗಿ ಚಂದ್ರ ಇಷ್ಟು ದೊಡ್ಡವನಾದನೆ ಎಂದು ಡಾಕ್ಟರು ವಿಚಾರಮಾಡ ತೊಡಗಿದರು.

ಈಸ್ಟರ್ ರಜೆ ದಿನಗಳಾರಂಭವಾದವು. ಫ್ಲೋರಾ ಮನೆಗೆ ಬಂದಿದ್ದಳು. ಚಂದ್ರ ಅವಳ ಜತೆ ಮೊದಲು ಬ್ರಿಸ್ಟಲ್‌ಗೆ ಹೋಗಿ ರಾಮ ಮೋಹನರಾಯರ ಸಮಾಧಿಗೆ ಹೂ ಒಪ್ಪಿಸಿಬಂದ. ಇಬ್ಬರೂ ಐರ್ಲೆಂಡಿಗೆ

ಹೋಗಿ ಐರಿಷ್ ಸಾಹಿತಿಗಳು, ಕಲಾವಿದರ ಪರಿಚಯ ಮಾಡಿಕೊಂಡು ಬಂದರು.

ಸೂಟಿ ಮುಗಿದ ಮೇಲೆ ಫ್ಲೋರಾ ಮತ್ತೆ ಕಾಲೇಜಿಗೆ ಹೊರಟು ಹೋದಳು. ಚಂದ್ರನ ಎಂ. ಎ ಮುಗಿದಿತ್ತು. ಡಿ. ಲಿಟ್ ಡಿಗ್ರಿಗೆ ತನ್ನ 'ಥೀಸಿಸ್' ಸಿದ್ಧಗೊಳಿಸುತ್ತ ಕುಳಿತ. ಅವನ ಪ್ರೊಫೆಸರ್ ಡಾ|| ಜೇಮ್ಸ್

"ನಿಮ್ಮಿಂದ ಥೀಸಿಸ್ ಕೇಳುವುದು ಸೂರ್ಯನಿಂದ ಕಾಂತಿ ಕೇಳಿದಂತೆ. ಆದರೂ ಕೇಳಬೇಕಾದದ್ದು ಶಿಷ್ಟಾಚಾರ" ಎಂದರು.

ಥೀಸಿಸ್‌ಗೆ ವಿಷಯ ಸಂಗ್ರಹಿಸಲು ತನ್ನ ವೇಳೆಯನ್ನೆಲ್ಲಾ ಬ್ರಿಟಿಷ್ ಮ್ಯೂಸಿಯಂನಲ್ಲಿ ಕಳೆಯಬೇಕಾಗಿತ್ತು. "ಭಾರತ ಕಂಡ ವರ್ಡ್ಸ್‌ವರ್ತ್" ಅವನ ವಿಷಯವಾಗಿತ್ತು. ಉಪನಿಷತ್ತು, ಗೀತೆಗಳ ವಿಚಾರಸರಣಿಯನ್ನು ವರ್ಡ್ಸ್‌ವರ್ತ್ ಕವಿ-ಹೇಗೆ ತನ್ನ ಕಾವ್ಯಗಳಲ್ಲಿ ಅನುಸರಿಸಿದ್ದಾನೆಂದು ಚಂದ್ರ ಚರ್ಚಿಸಿದ್ದ.

ಥೀಸಿಸ್ ಪ್ರಕಟವಾಯಿತು. ಅದಕ್ಕೆ ಮುನ್ನುಡಿ ಬರೆಯುತ್ತಾ ಬರ್ಟ್ರೆಂಡ್ ರಸೆಲ್‌ರವರು "ಪಾಂಡಿತ್ಯ ಬೇಕೇ – ವಿಷಯ ಪ್ರತಿಪಾದನೆ ಬೇಕೇ–ಪ್ರತಿಭೆ ಬೇಕೇ–ಎಲ್ಲಕ್ಕೂ ಹೆಚ್ಚಾಗಿ ಒಂದು ಉದಾತ್ತ ಜೀವಿಯ ಹೃದಯದ ಪರಿಚಯ ಬೇಕೇ – 'ಭಾರತ ಕಂಡ ವರ್ಡ್ಸ್‌ವರ್ತ್' ಗ್ರಂಥದಲ್ಲಿದೆ. ಗ್ರಂಥನಾಯಕ, ಕರ್ತೃ ಇಬ್ಬರೂ ಲೋಕಕ್ಕೆ ಮಾದರಿಯಾಗಬಲ್ಲ ಜನ. ಇದರಲ್ಲಿ ಯಾರು ಹೆಚ್ಚು ಯಾರು ಕಡಿಮೆ ಎಂದು ನಾನಿನ್ನೂ ವಿಚಾರಮಾಡುತ್ತಿದ್ದೇನೆ" ಎಂದು ಹೇಳಿದ್ದರು. ರಸೆಲ್‌ರಂಥ ಜಗನ್ಮಾನ್ಯ ವಿದ್ವಾಂಸರು ಆಡಿದ ಮಾತು ಚಂದ್ರನ ಬಾಳನೌಕೆಯನ್ನು ಬಹಳ ಮುಂದಕ್ಕೊಯ್ಯಿತು. ಕ್ಲೈವ್, ವಾರೆನ್ ಹೇಸ್ಟಿಂಗ್ಸ್, ಚರ್ಚಿಲ್, ಅಮೆರಿ, ವಿಲ್ಲಿಂಗ್‌ಡನ್ ಇವರ ಇಂಗ್ಲೆಂಡನ್ನು ಮಾತ್ರ ಕಂಡಿರುವ ನಮ್ಮ ಜನ ಷೇಕ್ಸ್‌ಪಿಯರ್, ಷೆಲ್ಲಿ, ವರ್ಡ್ಸ್‌ವರ್ತ್, ರಸೆಲ್, ಷಾ, ಎಥಿಲ್ ಮ್ಯಾನಿನ್ ಅವರ ಇಂಗ್ಲೆಂಡ್,–ನಿಜವಾದ ಇಂಗ್ಲೆಂಡನ್ನು ಹೆಚ್ಚುಹೆಚ್ಚಾಗಿ ಅರಿತುಕೊಳ್ಳಬೇಕು. ಅಂಥ ಇಂಗ್ಲೆಂಡನ್ನು ಬಲ್ಲ ಭಾರತೀಯರು ಅದರ ಪರಿಚಯ ಮಾಡಿಕೊಡಬೇಕಾದುದು ಅವರ ಕರ್ತವ್ಯ ಎಂದು ಚಂದ್ರ ತ್ರಿಕರಣಪೂರ್ವಕವಾಗಿ ನಂಬಿದ್ದ.

ಲೇಖಕರ ಸಾಮ್ರಾಜ್ಯದಲ್ಲಿ ಚಂದ್ರನ ಸ್ಥಾನ ಸುದೃಢವಾಯಿತು. ಬೇರೆಬೇರೆ ಪಕ್ಷಗಳಿಗೆ ಸೇರಿದ ಲೇಖಕರ ಸಂಘಗಳು ಅವನನ್ನು ಕರೆದು ಆದರಿಸಿ ಅವನ ಮಾತುಗಳನ್ನು ವಿಶ್ವಾಸದಿಂದ ಕೇಳುತ್ತಿದ್ದರು.

ಚಂದ್ರನ ಸೋಹೋ ಕಾರ್ಯಕ್ರಮ ದಿನದಿನಕ್ಕೆ ಬೆಳೆಯುತ್ತ ಬಂದಂತೆ, ಅಲ್ಲಿನ ದಲಿತ ಶ್ರಮಜೀವಿಗಳಿಗೆ ಏನಾದರೂ ಒಂದು ನೆಲೆಯನ್ನು ಕಲ್ಪಿಸಿ, ಅವರ ಮನಸ್ಸಿಗೆ ತುಸು ಶಾಂತಿಯನ್ನು ತರಬೇಕೆಂದು ಅವನು ಹಾತೊರೆಯುತ್ತಿದ್ದ. ಫ್ಲೋರಾ ತನ್ನ ಪರೀಕ್ಷೆ ಮುಗಿಸಿಕೊಂಡು ಬರುವ ದಿನವನ್ನು ಅತ್ಯಾತುರದಿಂದ ಕಾಯುತ್ತಿದ್ದ.

ಫ್ಲೋರಾ ಬಂದ ಕೆಲವು ದಿನ ನಗೆ, ಹರಟೆ, ಪಾಲ್‌ರೋಬ್ಸನ್ನನ 'ಒಥೆಲೋ' ನಾಟಕ ನೋಡುವುದರಲ್ಲಿ ಕಾಲ ಕಳೆಯಿತು. ಒಂದು ದಿನ ರಾತ್ರಿ ಊಟ ಮುಗಿಸಿ ಫ್ಲೋರಾ, ಓಷಿ-ಚಂದ್ರಾ ಕುಳಿತಿದ್ದಾಗ ಅವನೇ ಮಾತು ತೆಗೆದ

"ಮುಂದೆ ಎಲ್ಲಿಯಾದರೂ ನೌಕರಿ ಹಿಡಿದು ದುಡಿಯಬೇಕೆಂದು ನಿಮ್ಮ ಇಚ್ಛೆಯೇ ಫ್ಲೋರಾ" ಎಂದ.

"ಅದು ಬಿಟ್ಟು ನನಗೆ ಬೇರೆ ಮಾರ್ಗವೇ ಇಲ್ಲ."

"ಏಕೆ?"

"ಇಷ್ಟು ದಿವಸ ನಮ್ಮ ತಾಯಿ ರಕ್ತ ಮೂಳೆ ತೇಯ್ದು ನನಗೆ ವಿದ್ಯಾಭ್ಯಾಸ ಮಾಡಿಸಿದ್ದಾರೆ. ಇನ್ನು ಅವರ ಯೋಗಕ್ಷೇಮ ನೋಡಿಕೊಳ್ಳುವುದು ನನ್ನ ಕರ್ತವ್ಯವಲ್ಲವೇ?"

"ನಿಸ್ಸಂದೇಹವಾಗಿ. ಆದರೆ ನನಗೊಬ್ಬರ ಸಹಾಯ ಅತ್ಯಗತ್ಯ. ನೀವು ಸಹಾಯ ನೀಡಬಹುದೆಂದು ನಾನು ನಿರೀಕ್ಷಿಸಿದ್ದೆ."

"ಹೋ-ನಾನು ಯಾವ ರೀತಿಯಲ್ಲಿ ನೆರವಾಗಬಹುದು."

"ಸೋಹೋ ಶ್ರಮಜೀವಿಗಳನ್ನು ಒಂದು ಕಡೆ ಆಗಿಂದಾಗ್ಗೆ ಕೂಡಿಸಿ ಅವರಿಗೆ ಯಾವ ರೀತಿಯಲ್ಲಾದರೂ ಶಾಂತಿ ನೀಡಬೇಕೆಂದು ನನ್ನ ಹೆಬ್ಬಯಕೆ."

"ಸೊಗಸಾದ ಧ್ಯೇಯ-ಹೇಗೆ ಸಾಧಿಸುತ್ತೀರಿ."

"ಈಸ್ಟ್ ಅಂಡ್ ವೆಸ್ಟ್ ಸೊಸೈಟಿಯೊಂದನ್ನು ಸ್ಥಾಪಿಸುವುದು.

ಅಲ್ಲಿ ಒಂದು ವಾಚನಾಲಯ, ಪುಸ್ತಕ ಭಂಡಾರ ಏರ್ಪಡಿಸುವುದು. ವಾರಕ್ಕೊಮ್ಮೆ ಒಂದೆರಡು ತಾಸು ಎಲ್ಲರೂ ಸೇರಿ ಪ್ರಾಚ್ಯ—ಪಾಶ್ಚಾತ್ಯ ದೇಶಗಳ ಸಂಸ್ಕೃತಿ ಪರಿಚಯ ಮಾಡಿಕೊಳ್ಳುವುದು. ಮೊದಲು ಹೀಗೆ ಆರಂಭವಾಗಲಿ–ಅನಂತರ ಜನತೆಯ ಅವಶ್ಯಕತೆ ನೋಡಿ ಕಾರ್ಯಕ್ರಮ ವಿಸ್ತರಿಸೋಣ ಎಂದಿದ್ದೇನೆ. ”

“ ಸ್ಥಳ. ”

“ ಸದ್ಯಕ್ಕೆ ಮುಮ್ಮೆಯನ್ನು ಕೇಳಿ—ಕೆಳಗಿನ ಫ್ಲ್ಯಾಟನ್ನು ಬಾಡಿಗೆಗೆ ತೆಗೆದುಕೊಳ್ಳುವುದು—ಮುಂದೆ. ಕಾ ಯ ರ್ ಕ್ರ ಮ ಬೆಳೆದಂತೆ ಹೆಚ್ಚು ಫ್ಲ್ಯಾಟುಗಳನ್ನು ತೆಗೆದುಕೊಳ್ಳಬಹುದು. ”

“ ಖರ್ಚು? ”

“ ನನ್ನ ಲೇಖನ, ಗ್ರಂಥಗಳಿಂದ ಹಣ ಬರುತ್ತಿದೆ. ಆ ಹಣ ನನಗೆ ಬೇಕಿಲ್ಲ. ಸೊಸೈಟಿ ಅದರಿಂದ ನಡೆಯಲಿ. ಮುಂದೆ ಸದಸ್ಯರು ತಾವೇ ಸ್ವಲ್ಪ ಚಂದಾ ಕೊಟ್ಟು ನಡೆಸುತ್ತಾರೆ. ”

ನಿಮ್ಮ ಹಣ ಹೀಗೆ ಖರ್ಚು ಮಾಡಿದರೆ ನಾಳೆ ನಿಮ್ಮ ಪಾಡು. ”

“ ರೊಟ್ಟಿಯನ್ನು ತಿನ್ನಲೂ ಬೇಕು–ಉಳಿಸಲೂ ಬೇಕು– ಎಂದರೆ ಸಾಧ್ಯವಿಲ್ಲ ಫ್ಲೋರಾ ”

“ ನಾನು ಯೋಚನೆಮಾಡಿ ತಿಳಿಸಬಹುದಷ್ಟೇ. ”

“ ಅವಶ್ಯಕವಾಗಿ—ಒಂದು ವಾರ ಟೈಮ್ ತೆಗೆದುಕೊಳ್ಳಿ. ”

ಚಂದ್ರನ ನಿಯೋಜನೆಯನ್ನು ಕುರಿತು ಫ್ಲೋರಾ ವಾರವೆಲ್ಲಾ ಯೋಚಿಸಿದಳು. ಅವಳು ಏನು ಹೇಳಿಬಿಡುತ್ತಾಳೋ ಎಂದು ಚಂದ್ರ ಕುತೂಹಲಗೊಂಡಿದ್ದ. ಫ್ಲೋರಾ ತಾಯಿಯ ಜತೆ ಯೋಚಿಸಿದಳು. ತಾಯಿ ಒಂದೇ ಮಾತು ಹೇಳಿದಳು

“ ಆತ ಬಹಳ ದೊಡ್ಡ ಮನುಷ್ಯ. ಆತನ ಜತೆ ನೀನು ಕೆಲಸಮಾಡು ವುದು ನನಗೆ ಬಹಳ ಇಷ್ಟ ”

ಫ್ಲೋರಾ ನಿಶ್ಚಯಮಾಡಿ ‘ ಆಗಲಿ ’ ಎಂದು ಚಂದ್ರನಿಗೆ ಹೇಳಿದಳು. ಗೆದ್ದೆನೆಂದು ಚಂದ್ರ ಸಂತೋಷಿಸಿದ.

"ಈಸ್ಟ್ ಅಂಡ್ ವೆಸ್ಟ್ ಸೊಸೈಟಿ" ಆರಂಭವಾಯಿತು. ಟಾನ್ ಷಾನ್ ತಾನೂ ಅದರಲ್ಲಿ ಸೇರುವುದಾಗಿ ತಿಳಿದ. ವಾರಕ್ಕೊಮ್ಮೆ ಬಡ ಮಕ್ಕಳಿಗೆ ತಾನು ಸಂಗೀತ ಕಲಿಸುವುದಕ್ಕೆ ಹಾಫ್‌ಮನ್ ಒಪ್ಪಿಕೊಂಡ. ಸೊಸೈಟಿಗೆ ಮೊದಲು ಸೇರಿದವರು ಮಿಸಸ್ ಮಾರ್ಗನ್, ಆಕೆಯ ಗಂಡ ಗಣಿಯಲ್ಲಿ ಕೆಲಸಮಾಡುತ್ತಿದ್ದ ಮಾರ್ಗನ್ ಮತ್ತು ಅವರ ಮಕ್ಕಳು. ಬರಬರುತ್ತ ಜನ ಕೂಡುತ್ತ ಬಂದರು. ನಾಲ್ಕಾರು ತಿಂಗಳಲ್ಲಿ ಓಷಿ ಫ್ಲ್ಯಾಟು ಸಾಲದಾಗುತ್ತ ಬಂತು. ಚಂದ್ರ ಎರಡನೆಯ ಫ್ಲ್ಯಾಟನ್ನೂ ತೆಗೆದುಕೊಂಡ. ಸಂಸ್ಥೆಗೆ ಫ್ಲೋರಾ ಜನರಲ್ ಸೆಕ್ರೆಟರಿಯಾದಳು.

ವಾರದ ಸಭೆಗಳಿಗೆ ಒಂದೆರಡು ವಾರ ಎಲ್ಲರಿಗೂ ಓಷಿ ಚಹಾ ಮಾಡಿ ಕೊಟ್ಟಳು. ಅವಳ ಮೇಲ್ಪಂಕ್ತಿಯನ್ನನುಸರಿಸಿ ಇತರರು ತಾವು ಒಂದೊಂದು ವಾರ ಚಹಾ ಬಿಸ್ಕತ್ತು ಕೊಡುವುದಾಗಿ ತಿಳಿಸಿದರು.

ಪ್ರತಿವಾರ ವಾಚನ, ಚರ್ಚೆ, ಭಾಷಣಗಳಾಗುತ್ತಿದ್ದವು. ಟಾನ್ ಚೀಣ ಸಂಸ್ಕೃತಿಯ ಪರಿಚಯ, ಚಂದ್ರ ಭಾರತೀಯ ಸಂಸ್ಕೃತಿಯ ಪರಿಚಯ ಮಾಡಿಕೊಡುತ್ತಿದ್ದರು. ಹಾಫ್‌ಮನ್ ಅವರಿಗೆ ಪಿಟೀಲು ನುಡಿಸಿ ದೊಡ್ಡ ದೊಡ್ಡ ವಾಗ್ಗೇಯಕಾರರ ಪರಿಚಯ ಮಾಡಿಕೊಡುತ್ತಿದ್ದುದಲ್ಲದೆ ಫ್ರೆಂಚ್ ಸಂಸ್ಕೃತಿಯ ಬಗ್ಗೆ ಆಗಾಗ್ಗೆ ಭಾಷಣಮಾಡುತ್ತಿದ್ದ.

'ಈಸ್ಟ್ ಅಂಡ್ ವೆಸ್ಟ್' ಚಂದ್ರನ ಲೆಕ್ಕಾಚಾರ ಮೀರಿ ಬೆಳೆಯಿತು. ಬಳಲಿ ಬೆಂಡಾಗಿ ಬರುತ್ತಿದ್ದ ಶ್ರಮಜೀವಿ ಅಲ್ಲಿ ಒಂದು ತಾಸು ಕುಳಿತು ಯಾವದಾದರೂ ಪತ್ರಿಕೆ ಓದಿ, ರೇಡಿಯೋದಲ್ಲಿ ಒಂದಷ್ಟು ಗಾಯನ ಕೇಳಿ ತೃಪ್ತನಾಗಿ ಮನೆಗೆ ಹೋಗುತ್ತಿದ್ದ.

ಸೋಹೋದ ಹೆಣ್ಣುಮಕ್ಕಳು ಚಂದ್ರನನ್ನೂ ಫ್ಲೋರಾನನ್ನೂ ಪೂಜಿಸ ಲಾರಂಭಿಸಿದರು. ಸೊಸೈಟಿ ಆರಂಭವಾದ ಮೇಲೆ ಗಂಡಸರು 'ಗ್ರಾಗ್ ಷಾಪ್'ಗೆ (ಹೆಂಡದಂಗಡಿ) ಹೋಗುವುದು ಬಹಳ ಕಡಿಮೆಯಾಗಿತ್ತು.

ಮಕ್ಕಳು ಆಡುವುದಕ್ಕೆ ಒಂದು ಬಯಲು ಜಾಗ ಕೊಂಡು ಅದರಲ್ಲಿ ಆಟದ ಸಾಮಾನುಗಳನ್ನು ಜೋಡಿಸಿಟ್ಟರು. ಸೊಸೈಟಿಯ ಒಂದೆಡೆ ಔಷಧಾಲಯವೊಂದನ್ನೇರ್ಪಡಿಸಿ ಕಡಿಮೆ ದರದಲ್ಲಿ ಔಷದವನ್ನೊದಗಿಸುವ ವ್ಯವಸ್ಥೆ ಮಾಡಿದರು. ಮಾರ್ಗನ್ ಎಲ್ಲ ಚಟುವಟಿಕೆಗಳಲ್ಲಿಯೂ ವಿಶೇಷ

ಉತ್ಸಾಹ ವಹಿಸುತ್ತಿದ್ದುದರಿಂದ ಅವನನ್ನೇ ಅಧ್ಯಕ್ಷನನ್ನಾಗಿ ಚುನಾಯಿಸಿದರು. ಸೊಸೈಟಿಯ ಖರ್ಚು ವೆಚ್ಚವನ್ನು ಸೋಹೋದ ಜನ ಸಂತೋಷವಾಗಿ ವಹಿಸಲಾರಂಭಿಸಿದರು. ಸಣ್ಣದಾಗಿ ಆರಂಭಿಸಿದ ಸಂಸ್ಥೆ ಬೃಹದಾಕಾರ ತಾಳಲಾರಂಭಿಸಿತು. ನಿರ್ಗತಿಕರಿಗೆ ಅದು ಆಶ್ರಯ ಸ್ಥಾನವಾಯಿತು. ಸಹಾಯರಹಿತ ವಿದ್ಯಾರ್ಥಿಗಳಿಗೆ ಅದು ಅಶನವಸನಗಳನ್ನೊದಗಿಸತೊಡಗಿತು. ಸೊಸೈಟಿಯ ಖ್ಯಾತಿ ಸರ್ಕಾರದವರೆಗೆ ಹಬ್ಬಿತು. ದೇಶ ವಿದೇಶಗಳ ಪತ್ರಿಕಾ ಪ್ರತಿನಿಧಿಗಳು ಸೊಸೈಟಿಯ ಕಾರ್ಯ ಕಲಾಪಗಳನ್ನು ಪ್ರಶಂಸಿಸಿ ಚಂದ್ರನ ಮೇಲೆ ಉದ್ದುದ್ದ ಲೇಖನಗಳನ್ನು ಬರೆದರು.

ಒಂದು ದಿನ ಸಂಜೆ ಚಂದ್ರಾ, ಫ್ಲೋರಾ ಥೇಮ್ಸ್ ಎಂಬ್ಯಾಕ್‌ಮೆಂಟ್‌ಮೇಲೆ ಗಾಳಿ ಸಂಚಾರ ಹೊರಟರು. ಆಕಾಶ ಶುಭ್ರವಾಗಿ ಸುನೀಲವಾಗಿತ್ತು. ಬಿದಿಗೆ ಚಂದ್ರನ ಪ್ರತಿಬಿಂಬ ನೀರಿನ ಮೇಲೆ ಮಿನುಗುತ್ತಿತ್ತು. ಅದನ್ನು ನೋಡುತ್ತ ಇಬ್ಬರೂ ನಿಂತರು

"ಫ್ಲೋ...." ಎಂದ ಚಂದ್ರ.

"ಏನು ?" ಎಂದಳು.

"ಇಂದು ಪ್ರಕೃತಿ ಎಷ್ಟು ರಮ್ಯವಾಗಿದೆ."

"ಹೌದು-ಅತ್ಯಂತ ಸುಂದರವಾಗಿದೆ. ಲಂಡನ್ ಕೂಡ ತನ್ನ ಸ್ವಭಾವ ಜನ್ಯವಾದ ವಕ್ರ ಹವಾಮಾನ ಬಿಟ್ಟಿದೆ. ಲಂಡನ್ ಇಂದು ನಿಮ್ಮ ಭಾರತವನ್ನು ಅನುಕರಿಸುತ್ತಿದೆ."

"ನನ್ನ ಭಾರತ........"

ಎಂದು ಚಂದ್ರ ಮಾನಸಿಕವಾಗಿ ಲಂಡನ್ ಬಿಟ್ಟು ಭಾರತಕ್ಕೆ ಬಂದ.

"ಊರ ನೆನಪಾಯಿತೇ ?"

"ಆಗದೆ ಉಂಟೇ ?—ಆದರೆ ನೆನಪು ಕೊರಗಾಗದಂತೆ ನೀವೆಲ್ಲಾ ಉಪಕಾರ ಮಾಡಿರುವಿರಿ."

"ಉಪಕಾರದ ಮಾತೆತ್ತಬೇಡಿ. ನಿಮ್ಮ ವಿಚಾರದಲ್ಲಿ ನಾವು ಮಾತಿನಿಂದ 'ಉಪಕಾರವಾಯಿತು' ಎಂದು ಹೇಳುವುದು ಅಪಚಾರವಾದೀತು."

"ನನ್ನನ್ನು ಹೊಗಳ ಬೇಡಿ. ನೀವೆಲ್ಲಾ ದುಡಿದದ್ದರಿಂದಲೇ ಈಸ್ಟ್ ವೆಸ್ಟ್ ಒಂದು ಸಂಸ್ಥೆಯಾದುದು."

"ಮಾತು ಎಲ್ಲಿಗೋ ಹೋಯಿತು. ನೀವು ಯೋಚಿಸುತ್ತಿದ್ದುದನ್ನು ಹೇಳಲೇ ಇಲ್ಲವಲ್ಲಾ."

"ಹೂ! ಮರೆತಿದ್ದೆ. ಪ್ರಕೃತಿ ಇಂದು ಇಷ್ಟು ಸುಂದರವಾಗಿದೆ. ಆದರೆ ಚಂದ್ರ ಮೂಡದಿದ್ದರೆ ಇವಕ್ಕೆ ಈ ಸೌಂದರ್ಯ ಬರುತ್ತಿತ್ತೆ."

"ಹೇಗೆ ಸಾಧ್ಯ."

"ಇಂದು ನನ್ನ ಬಾಳು ಈ ಪ್ರಕೃತಿಯ ಹಾಗೆ ಆಗಿದೆ. ಆದರೆ ಅದರಲ್ಲಿ ಇನ್ನೂ ಚಂದ್ರೋದಯವಾಗಿಲ್ಲ."

"ನಿಮ್ಮ ಚಂದ್ರ ಯಾರು ಎಂದು ಕೇಳಲೇ?"

"ಯಾರೆಂದು ತಿಳಿದೂ ನೀನೇ ಕೇಳಬೇಕೇ."

ನಾಚಿಕೆಯಿಂದ ಫ್ಲೋರಾ ಸುಂದರವದನ ಮತ್ತಷ್ಟು ಕೆಂಪಗಾಯಿತು. ಚಂದ್ರ ಅವಳ ಸಮೀಪಕ್ಕೆ ಬಂದು ಕೈ ಹಿಡಿದು ಆರ್ತತೆಯಿಂದ

"ಫ್ಲೋ—ನನ್ನ ಬಾಳನ್ನು ಬೆಳಗಿಸುತ್ತೀಯಾ?"

ಫ್ಲೋ ಅವನನ್ನು ಕತ್ತೆತ್ತಿ ನೋಡಿದಳು. ಅವಳ ಕಣ್ಣುಗಳು ತೇವಗೊಂಡಿದ್ದವು.

"ಈ ಪ್ರಶ್ನೆ ಕೇಳಲು ಇಷ್ಟೇಕೆ ತಡಮಾಡಿದಿರಿ—ಡಾರ್ಲಿಂಗ್"

ಎಂದಳು. ಚಂದ್ರನ ತೋಳು ಅವಳ ಬುಜವನ್ನಪ್ಪಿತು.

ಈ ಸುದ್ದಿ ಕೇಳಿ ತಾಯಿ ಓಷಿ ಕುಣಿದಾಡಿದಳು. ಅಂದೇ ಸೋಹೋ ಬಂಧುಗಳನ್ನೆಲ್ಲಾ ಕರೆದು 'ನಿಶ್ಚಿತಾರ್ಥ'ವನ್ನು ಪ್ರಕಟಿಸಿದರು. ಸೋಹೋ ತನ್ನ 'ಇಂಡಿಯನ್ ಬ್ರದರ'ನ್ನು ಹೆಗಲಮೇಲೆ ಕೂರಿಸಿಕೊಂಡು ಮೆರೆದಾಡಿತು.

ಮದುವೆ ಮೂರು ತಿಂಗಳೊಳಗೆ ಆಗಿಹೋಯಿತು. ದೇಶದ ಮೂಲೆ ಮೂಲೆಗಳಿಂದ ವಧೂವರರಿಗೆ ಅಭಿನಂದನೆಗಳು, ಉಡುಗೊರೆಗಳೂ ಬಂದವು. ಬೆಂಗಳೂರಿನಿಂದ ಶ್ರೀನಿವಾಸಮೂರ್ತಿ ನಾದಿನಿಗೆ ಸೊಗಸಾದ ಧರ್ಮಾವರದ ಸೀರೆ ಕಳುಹಿಸಿದ್ದ. ಕಾಂತಾ, ಕುಮುದ ಅಣ್ಣನಿಗೆ ಪ್ರೀತಿಪೂರ್ವಕ ಕಾಗದಗಳನ್ನು ಬರೆದರು.

ಮದುವೆ. ಫ್ಲೋರಾ, ಚಂದ್ರರ ಸಂಬಂಧವನ್ನು ಅದಲುಬದಲು ಮಾಡಲಿಲ್ಲ. ಅದೇ ಮೈತ್ರಿ, ಅದೇ ಕರ್ತವ್ಯ ಪರಾಯಣತೆ, ಅದೇ ಸೇವಾ ಕಾಂಕ್ಷೆ ಅವರಲ್ಲಿ ಭದ್ರವಾಗಿ ಉಳಿಯಿತು,

ಫ್ಲೋ ಸೊಸೈಟಿಯ ಕೆಲಸಕ್ಕೆ ಒಬ್ಬ ಸಹಾಯಕ ಕಾರ್ಯದರ್ಶಿಯನ್ನು ತೆಗೆದುಕೊಂಡಳು. ತಾಯಿಗೆ ಆದಷ್ಟು ವಿಶ್ರಾಂತಿ ಕೊಡಬೇಕೆಂದು ಮನೆಗೆಲಸಗಳನ್ನೆಲ್ಲಾ ತಾನೇ ನಿರ್ವಹಿಸತೊಡಗಿದಳು.

ಫ್ಲೋಗೆ ಅಡಿಗೆಯ ಹದ ತಿಳಿಯಬೇಕಾದರೆ ಕೆಲವು ತಿಂಗಳು ಹಿಡಿಯಿತು. ಚಂದ್ರಾ ಅವಳಿಗೆ ಭಾರತೀಯ ಭಕ್ಷ್ಯಭೋಜ್ಯಗಳನ್ನು ಮಾಡುವುದನ್ನು ಕಲಿಸಿದ್ದ. ಊಟ ಉಪಚಾರದಲ್ಲಿಯೂ ಅವರ ಮನೆ 'ಈಸ್ಟ್–ವೆಸ್ಟ್'ಗಳ ಸಮನ್ವಯವನ್ನು ಸಾರುತ್ತಿತ್ತು.

ಫ್ಲೋ ಮನಸ್ಸಿನಲ್ಲಿ ಒಂದು ನಿರ್ಧಾರಕ್ಕೆ ಬಂದಳು. ಚಂದ್ರ ಸ್ವದೇಶ-ಸ್ವಜನ ಎಲ್ಲರನ್ನೂ ಬಿಟ್ಟು ಬಂದು ಇಲ್ಲಿ–ಇಂಗ್ಲೆಂಡಿನಲ್ಲಿ ಸೇವಾದೀಕ್ಷೆ ವಹಿಸಿದ್ದಾನೆ, ಆದಷ್ಟು ಅವನಿಗೆ ಪ್ರಿಯವಾದ ರೀತಿಯಲ್ಲಿ ನಡೆದುಕೊಳ್ಳಬೇಕು. ಹಿಂದೂಸ್ಥಾನ ಬಿಟ್ಟು ಬಂದಿದ್ದೇನೆಂಬ ದುಃಖ ಮನಸ್ಸಿಗೆ ಬರದಂತೆ ವರ್ತಿಸಲು ಪ್ರಯತ್ನಿಸುತ್ತಿದ್ದಳು.

ಒಂದೊಂದು ಸಲ ಮುಗ್ಧರೀತಿಯಲ್ಲಿ ಅವಳು ಕೇಳುತ್ತಿದ್ದ ಪ್ರಶ್ನೆಗಳನ್ನು ಕಂಡು ಚಂದ್ರ ನಗುತ್ತಿದ್ದ. ಅವಳಿಗೆ ಸೀರೆಯುಡುವುದನ್ನು ಕಲಿಸುವುದಕ್ಕೆ ತನ್ನ ಬುದ್ಧಿಯನ್ನೆಲ್ಲಾ ವ್ಯಯಮಾಡಬೇಕಾಯಿತು. ಹಿಂದೂ ಹೆಣ್ಣು ಮಕ್ಕಳು ಹೇಗೆ ಇರುತ್ತಾರೆ–ಹೇಗೆ ಪೂಜೆಪುರಸ್ಕಾರ ಮಾಡುತ್ತಾರೆ-ಎಲ್ಲವನ್ನೂ ಚಂದ್ರನಿಂದ ಸಂಗ್ರಹಿಸಿ ಆಚರಣೆಗೆ ತರತೊಡಗಿದಳು. ಕುಂಕುಮವಿಲ್ಲದೆ ಅವಳು ಬರಿ ಹಣೆಯಲ್ಲಿ ಇರಲೊಲ್ಲಳು.

"ನನಗೊಂದು ಹೆಸರಿಡಿ ಡಾರ್ಲಿಂಗ್" ಎಂದು ಕೇಳಿದಳು.

"ಏಕೆ–ಈಗಿರುವ ಫ್ಲೋರಾ ದಿವ್ಯವಾಗಿದೆಯಲ್ಲಾ."

"ಈಗ ನಾನು ಭಾರತೀಯಳು—ನನಗೆ ನನ್ನ ದೇಶದ ಹೆಸರು ಬೇಕು."

"ನೀನೇ ಹೇಳು ಯಾವ ಹೆಸರು ಚೆನ್ನು."

"ಆ ಮಹಾತಾಯಿ ರಾಮವಲ್ಲಭೆಯ ಹೆಸರು ಚೆನ್ನಾಗಿಲ್ಲವೇ?"

" ಅದೇ ಆಗಲಿ—ಸೀತಾ ! "

" ಸೀತಾ-ಸೀತಾ-ಸೀತಾ " ಎಂದುಕೊಂಡು ತಾನೇ ಹಿಗ್ಗಿದಳು.

ಫ್ಲೋ ಭಾರತದ ಪರಿಚಯ ಪಡೆಯುವುದಕ್ಕೆ ಹೆಚ್ಚು ದಿನ ಹಿಡಿಯ ಲಿಲ್ಲ. ಗೀತೆ, ಉಪನಿಷತ್ತು, ರಾಮಾಯಣ, ಭಾರತವನ್ನೆಲ್ಲಾ ಮಗುಚಿ ಹಾಕಿದಳು.

" ಯೂರೋಪಿನಲ್ಲಿ ಹುಟ್ಟಿದೆ. ಆದರೆ ಆತ್ಮ ಭಾರತದ್ದು "

ಎಂದು ನಿಸ್ಸಂಕೋಚದಿಂದ ಒಪ್ಪಿಕೊಂಡಳು. ಚಂದ್ರನ ಅತಿಥಿಗಳಾಗಿ ಬರುತ್ತಿದ್ದ ಭಾರತೀಯರು ಫ್ಲೋನ ರೀತಿನೀತಿಯನ್ನು ಕಂಡು 'ಎಷ್ಟು ಪುಣ್ಯಶಾಲಿಗಳು ನೀವು' ಎಂದು ಹೇಳುತ್ತಿದ್ದರು.

ಮಿಸಸ್ ಮಾರ್ಗನ್ ಕಾಣಲಿಕ್ಕೆ ಚಂದ್ರ ಹೋಗಿದ್ದಾಗ ಒಂದು ದಿನ ಕೇಳಿದಳು.

" ಮಿ. ಚಂದ್ರ, ಭಾರತೀಯರು ಯಕ್ಷಣಿವಿದ್ಯಾ ಪ್ರವೀಣರಂತೆ ಹೌದೇ."

"ನಮ್ಮ ದೇಶದ ಬಗ್ಗೆ ಸಾಮಾನ್ಯವಾಗಿ ಪ್ರಸಾರದಲ್ಲಿರುವ ಅಭಿಪ್ರಾಯ ಅದೇ ಆಗಿದೆ. ಒಮ್ಮೆ ಒಬ್ಬ ಪ್ರಸಿದ್ಧ ಭಾರತೀಯರನ್ನು ಯೂರೋಪಿನಲ್ಲಿ ಕೇಳಿದರಂತೆ ' ನಿಮ್ಮ ದೇಶದಲ್ಲಿ ವಜ್ರಗಳು ಹಾವುಗಳು ಬಹಳವಂತೆ ಹೌದೇ, ಎಂದು.' ಅದಕ್ಕವರು ಏನು ಉತ್ತರಿಸಿದರು ಬಲ್ಲಿರಾ ' ಹೌದು, ಆದರೆ ವಜ್ರವನ್ನು ಸುತ್ತಿಗೊಂಡು ಹಾವು ಕುಳಿತಿರುತ್ತದೆ.' ಈಸ್ಟ್, ವೆಸ್ಟ್ ಸ್ಥಾಪನೆಯಾದ ಮೇಲೂ ಇಂಥ ಪ್ರಶ್ನೆ ಕೇಳುವಿರಲ್ಲಾ ಮಿಸಸ್ ಮಾರ್ಗನ್. "

" ಅದಕ್ಕೆ ಕಾರಣವಿದೆ. ನೀವಂತೂ ಯಕ್ಷಿಣಿ ಬಲ್ಲಿರೆಂದು ನಾನು ಧೈರ್ಯವಾಗಿ ಹೇಳಬಲ್ಲೆ "

" ಹೇಗೆ ? "

"ಫ್ಲೋರಾನ ನೋಡಿದರೆ ಗೊತ್ತಾಗುತ್ತದೆ. ಅವಳು ಐರೋಪ್ಯಳೆಂದು ಪ್ರಮಾಣಮಾಡಿದರೂ ಯಾರೂ ನಂಬುವುದಿಲ್ಲ. ಮಾತೆತ್ತಿದರೆ ' ಲಾರ್ಡ್ ಕೃಷ್ಣ ಹೀಗೆ ಹೇಳುತ್ತಾರೆ—ಹಾಗೆ ಹೇಳುತ್ತಾರೆ ' ಅನ್ನುತ್ತಾಳೆ. ನೀವು ತುಂಬ ಅದೃಷ್ಟಶಾಲಿಗಳು ಮಿಸ್ಟರ್ ಚಂದ್ರಾ. "

“ ಸತ್ಯವಾದ ಮಾತು ಹೇಳಿದಿರಿ. ”

ಎಂದು ಚಂದ್ರ ಒಪ್ಪಿಕೊಂಡ. ಈ ಕಥೆ ಫ್ಲೋರಾಗೆ ಹೇಳಿದಾಗ ಅವಳು ಗಹಗಹಿಸಿ ನಕ್ಕಳು.

“ ನನ್ನನ್ನು ಜಾತಿಕೆಡಿಸಿದರೆಂದು ಜನ ನಿಮ್ಮನ್ನು ಲಿಂಚ್ (Lynch) ಮಾಡದಿದ್ದರೆ ಸಾಕು. ”

ಚಂದ್ರನೂ ನಕ್ಕು

“ ಫ್ಲೋರಾ ಡಾರ್ಲಿಂಗ್. ”

“ ಏನು ಡಿಯರ್ ? ”

“ ಇಂಥದು ಬೇಕು ಎಂದು ನೀನು ಇದುವರೆಗೆ ಕೇಳಿಲ್ಲ. ನಿನಗಾಗಿ ನಾನು ಏನಾದರೂ ತಂದುಕೊಡಲು ಅವಕಾಶ ಕೊಡುವುದಿಲ್ಲವೇ ? ”

“ ನನಗೆ ಬೇಕಾದುದನ್ನು ಖಂಡಿತ ತಂದುಕೊಡುವಿರಾ ? ”

“ ಸಂಶಯವೇಕೆ ? ”

“ ಸಂಶಯಕ್ಕಲ್ಲ-ನೀವು ಕೇಳಿ ನಗುವಿರೇನೋ ಎಂದು ಯೋಚಿಸಿದೆ. ”

“ ಇಲ್ಲ. ಹೇಳು ನಿನಗೇನು ಬೇಕು. ”

“ ನನಗೆ ಬುದ್ಧ, ನಟರಾಜನ ಎರಡು ಪ್ರತಿಮೆಗಳು ಬೇಕು. ”

“ ಮೈಸೂರಿಗೆ ಬರೆದು ತರಿಸಿಕೊಡುತ್ತೇನೆ. ”

“ ಇನ್ನೊಂದು ಉಪಕಾರ ಮಾಡುವಿರಾ ? ”

“ ಉಪಕಾರ ಶಬ್ದ ನೀನು ಉಪಯೋಗಮಾಡಬಾರದು ಡಾರ್ಲಿಂಗ್. ”

“ ಇಲ್ಲ. ನಾನು ಹೇಳುವುದನ್ನು ಖಂಡಿತ ಮಾಡುತ್ತೇನೆಂದು ಮಾತುಕೊಡಿ. ”

“ ಖಂಡಿತವಾಗಿ ಆಗಲಿ. ”

“ ಊರಿಗೆ ಕಾಗದ ಬರೆದು ನಿಮ್ಮ ಸೋದರ, ಸೋದರಿಯರನ್ನೊಮ್ಮೆ ಇಲ್ಲಿಗೆ ಕರೆಸಿ. ನಾಲ್ಕು ದಿವಸ ಅವರು ನಮ್ಮ ಜತೆಯಲ್ಲಿರಲಿ.

ಫ್ಲೋರಾ ಮನಸ್ಸು ಚಂದ್ರನಿಗೆ ಅರ್ಥವಾಯಿತು. ತಾನು ಸ್ವಜನ ರನ್ನು ನೋಡಲು ಬಯಸುತ್ತಿರಬಹುದೆಂದು ಭಾವಿಸಿ ಅವಳು ಅದನ್ನು ತನ್ನ ಕೋರಿಕೆಯಾಗಿ ಸೂಚಿಸಿದ್ದಳು. ಪ್ರತಿಯೊಂದು ಮಾತು, ನಡತೆ

ಯಲ್ಲಿಯೂ ಒಡೆದು ಕಾಣುತ್ತಿದ್ದ ಫ್ಲೋರಾ ದೊಡ್ಡ ಮನಸ್ಸು ಚಂದ್ರನನ್ನು ಪರಮ ಸಂತುಷ್ಟನನ್ನಾಗಿ ಮಾಡಿತು.

"ಕರೆಸಿದ ಮೇಲೆ ಖರ್ಚು ವೆಚ್ಚವೆಲ್ಲಾ ನಾವೇ ವಹಿಸಬೇಕಾಗುತ್ತದೆ."

"ಕೈಯಿಂದ ಖರ್ಚುಮಾಡಿಕೊಂಡು ಬನ್ನಿರೆಂದು ಹೇಳುವುದು ಯಾವ ನ್ಯಾಯ."

"ಒಂದು ಸಾವಿರ ಪೌಂಡಾಗುವುದಲ್ಲ ಫ್ಲೋರಾ."

"ಆಗಲಿ. ಒಮ್ಮೆ ನಾವೂ ಶ್ರೀಮಂತರಂತೆ ಖರ್ಚು ಮಾಡೋಣ."

"ನಿನ್ನ ಇಷ್ಟದಂತೆ ಆಗಲಿ."

ಎಂದು ಒಪ್ಪಿಕೊಂಡ.

ಆಮಂತ್ರಣ ಓಲೆ ಬಂದಾಗ ಕಾಂತ ಶ್ರೀನಿವಾಸಮೂರ್ತಿಯ ಮನೆಯಲ್ಲೇ ಇದ್ದಳು. ಎಲ್ಲರೂ ಚಂದ್ರ ಫ್ಲೋರಾ ಸಹಿ ಮಾಡಿ ಕಳುಹಿಸಿದ ಪತ್ರ ನೋಡಿ ಹಿಗ್ಗಿದರು. ಕುಮುದನ ಸಂತೋಷಕ್ಕಂತೂ ಪಾರವೇ ಇಲ್ಲ.

ಕಾಂತ ಗಂಡನಿಗೆ ಗಂಟುಬಿದ್ದು ಅವನನ್ನೂ ಹೊರಡಿಸಿದಳು. ಶ್ರೀನಿವಾಸಮೂರ್ತಿ, ಶಾಮಲೆ ನೂರೆಂಟು ಅನಾನುಕೂಲ ಹೇಳಿ ತಮಗೆ ಹೊರಡಲು ಸಾಧ್ಯವಿಲ್ಲವೆಂದು ತಿಳಿಸಿದರು.

ಲಂಡನ್ ಯಾತ್ರೆಗೆ ಕಾಂತಾ, ಕಾಂತನ ಗಂಡ ರಂಗಸ್ವಾಮಿ, ಕುಮುದ ಸಿದ್ಧರಾದರು. ಪ್ಯಾಸಪೋರ್ಟು, ಪ್ಯಾಸೇಜ್ ಹಣ ಬರಲು ತಡವಾಗಲಿಲ್ಲ. ಹೊರಟೇಬಿಟ್ಟರು.

ಅವರನ್ನು ಸ್ವಾಗತಿಸುವುದಕ್ಕೆ ಚಂದ್ರ, ಬರೂಚಾ, ಮಿಸ್ಟರ್ ಮಾರ್ಗನ್ ಹೊರಟರು. ಫ್ಲೋರಾ ಮನೆಯಲ್ಲಿಯೇ ನಿಂತು ಅತಿಥಿಗಳ ಚಹಾ ಊಟದ ವ್ಯವಸ್ಥೆ ನೋಡುವುದಾಗಿ ಹೇಳಿದಳು.

ಅಣ್ಣನನ್ನು ಕಂಡು ಕುಮುದ ಹಾರಿ ಬಂದು ಅಪ್ಪಿದಳು. ಕಾಂತಾ ತನ್ನ ಗಂಡನ ಪರಿಚಯಮಾಡಿಕೊಟ್ಟಳು.

ಮನೆಗೆ ಬಂದ ಕೂಡಲೆ ಚಂದ್ರ ಫ್ಲೋರಾ, ಓಷಿತಾಯಿಯ ಪರಿಚಯ ಎಲ್ಲರಿಗೂ ಮಾಡಿಕೊಟ್ಟ. ಪೌಡರ್ ಹಚ್ಚದೆ, ಒಂದು ಸೀರೆ ಉಟ್ಟು,

ಹಣೆಗೆ ಕುಂಕುಮವಿಟ್ಟು, ತಲೆಗೂದಲು ಗಂಟು ಹಾಕಿ " ಸ್ವಾಗತ "ಎಂದು ಹೇಳಿದ ಫ್ಲೋರಾನನ್ನು ಅತಿಥಿಗಳು ಎವೆಯಿಕ್ಕದೆ ನೋಡಿದರು. ಮಾತಾಳಿ ಕುಮುದ ಕೇಳಿಯೇಬಿಟ್ಟಳು.

" ಇವರು ನಮ್ಮವರ ಹಾಗೆ ಕಾಣುತ್ತಾರೆ—ನಿನ್ನ ಐರಿಷ್ ಹೆಂಡತಿ ಎಲ್ಲಿ ಚಂದ್ರಣ್ಣ. "

" ಇವರೇ ಅವರಮ್ಮಾ "

ಎಂದ.

ತನ್ನ ಕೆಲಸಕಾರ್ಯಗಳ ಉಪಟಳದಲ್ಲಿ ಅತಿಥಿಗಳಿಗೆ ಸಾಕಷ್ಟು ವೇಳೆ ಕೊಡಲು ಚಂದ್ರನಿಗೆ ಸಾಧ್ಯವಾಗುತ್ತಿರಲಿಲ್ಲ. ಅವರನ್ನು ಆದರಿಸುವುದು ಉಪಚರಿಸುವುದು, ಊರಿನ ಸುಂದರ ನೋಟಗಳನ್ನು ತೋರಿಸುವುದು ಎಲ್ಲ ಕೆಲಸ ಫ್ಲೋರಾ ಮೇಲೇ ಬಿತ್ತು. ಎಲ್ಲಿಗೆ ಹೋದರೂ—ಕಣ್ಣಿಗೆ ಬಿದ್ದ ಸಾಮಾನನ್ನು ಕೊಂಡ ಹೊರತೂ ಕಾಂತಳಿಗೆ ಸಮಾಧಾನವಾಗುತ್ತಿರಲಿಲ್ಲ. ಅಲಂಕಾರದ ಸಾಮಾನುಗಳೆಂದರೆ ಅವಳಿಗೆ ಜೀವ. ಅವಳು ಕೊಳ್ಳುತ್ತಿದ್ದ ಪೌಡರ್, ರೂಜ್, ಹೇರ್‌ವಾಷ್, ಮತ್ತಿತರ ವಸ್ತುಗಳನ್ನು ಅನಾಸಕ್ತಿಯಿಂದ ಫ್ಲೋರಾ ನೋಡುತ್ತ ನಿಲ್ಲುತ್ತಿದ್ದಳು. ಒಂದು ದಿನ ಇಂಥ ವ್ಯಾಪಾರ ಸಾಗಿತ್ತು. ಕಾಂತ ಅತ್ತಿಗೆಗೆ

" ನೀವು ಸ್ವಲ್ಪ ಪೌಡರ್, ರೂಜ್ ತೆಗೆದುಕೊಳ್ಳಿ " ಎಂದಳು.

"ನಾನು ಪೌಡರ್ ರೂಜ್ ಹಾಕುವುದಿಲ್ಲ" ಎಂದಳು ಫ್ಲೋರಾ.

"ಏಕೆ ಹಾಕುವುದು ತಪ್ಪೇ ? "

"ತಪ್ಪುಸರಿಯೆಂದು ಹೇಳುವುದು ನನ್ನ ಕೆಲಸವಲ್ಲ. ನಾನು ಒಬ್ಬ ಬಡವನ ಮಡದಿ. ನನ್ನಿಂದ ಅವರಿಗೆ ಹಿಂಸೆಯಾಗದ ಹಾಗೆ ಇರಬೇಕಾದುದು ನನ್ನ ಧರ್ಮ."

ಎಂದಳು. ರಂಗಸ್ವಾಮಿ ಕಾಂತನ ಮುಖನೋಡಿದ.

ಇನ್ನೊಂದು ದಿನ ಮಾತಿಗೆ ಮಾತು ಬೆಳೆದು

"ಫ್ಲೋರಾ—ನಿಮ್ಮನ್ನು ನೋಡಿ ನಮಗೆ ಬಹಳ ನಿರಾಶೆಯಾಗಿದೆ. "

ಎಂದು ಕಾಂತಾ ಹೇಳಿದಳು. ಐರಿಷ್ ತುಂಟತನವನ್ನು ಚಿಮ್ಮುತ್ತಾ ಫ್ಲೋರಾ

"ಏಕೆ ಅತ್ತಿಗೆ."

"ನಮ್ಮಣ್ಣ ಯಾರೋ ಫ್ಯಾಷನಬಲ್ ಐರಿಷ್ ಹೆಣ್ಣನ್ನು ಲಗ್ನವಾಗಿದ್ದಾನೆ, ನಮಗಿಂತಲೂ ಬಹಳ ಮುಂದೆ ಹೋಗುತ್ತಿದ್ದಾನೆ ಎಂದುಕೊಂಡು ನಾವು ಬಹಳ ಹೆಮ್ಮೆ ಪಡುತ್ತಿದ್ದೆವು. ಇಲ್ಲಿ ನೋಡಿದರೆ ಅವನು ಲಗ್ನವಾಗಿರುವುದು ಬಿಚ್ಚೋಲೆ ಗೌರಮ್ಮನನ್ನು......."

"ಅಲ್ಲ.......ಸೀತಮ್ಮನನ್ನು"

ಎಂದು ಚಂದ್ರ ತಿದ್ದಿದ.

"ಹಾಗಾದರೆ ಯುರೋಪಿನ ಹೆಣ್ಣುಮಕ್ಕಳೆಲ್ಲಾ ಸಿನೀಮಾ ನಟಿಯರ ಹಾಗಿರುತ್ತಾರೆ ಎಂದು ಭಾವಿಸಿದ್ದಿರಾ ಕಾಂತಾ."

"ಸ್ವಲ್ಪ ಹೆಚ್ಚು ಕಡಿಮೆ."

"ಕಾಂತಾ—ಪ್ರತಿಯೊಂದು ದೇಶಕ್ಕೂ ಎರಡು ಮುಖವಿದೆ. ಒಂದು ಸಂಪತ್ತು—ವಿಲಾಸ—ಭೋಗದ ಮುಖ; ಇನ್ನೊಂದು ಬಡತನ-ವಿಕಾಸ-ತ್ಯಾಗದ ಮುಖ. ಭಾರತದಲ್ಲಿ ಇಂಥ ಎರಡು ಜಾತಿಯ ಜನವಿರುವ ಹಾಗೆ ಇಂಗ್ಲೆಂಡಿನಲ್ಲಿಯೂ ಇದ್ದಾರೆ—ಫ್ರಾನ್ಸ್ ಅಮೆರಿಕಾಗಳಲ್ಲಿಯೂ ಇದ್ದಾರೆ. ಒಮ್ಮೆ ನಮ್ಮ ಸೋಹೋ ಸುತ್ತಿಕೊಂಡು ಬನ್ನಿ—ಇಲ್ಲಿನ ತಾಯಂದಿರ ನಿಸ್ತೇಜ ಮುಖಗಳನ್ನು ನೋಡಿ ಬನ್ನಿ. ಬಟ್ಟೆಯಿಲ್ಲದೆ ಚಳಿಯಲ್ಲಿ ಕೊರಗಿ ಸಾಯುವ ಮಕ್ಕಳನ್ನು ನೋಡಿ ಬನ್ನಿ. ವಿದ್ಯೆಗೆ ಹಾತೊರೆಯುತ್ತಾ ಪಾರ್ಕಿನ ದೀಪದ ಕೆಳಗೆ ಕುಳಿತು ಓದುವ ವಿದ್ಯಾರ್ಥಿಗಳನ್ನು ನೋಡಿಬನ್ನಿ—ಇದು ಇಂಗ್ಲೆಂಡ್—ನಿಜವಾದ ಇಂಗ್ಲೆಂಡ್—"

"ಹಾಗಾದರೆ ಸಂಪತ್ತಿನ ಅನುಕೂಲವಿದ್ದವರು ಅದನ್ನು ಉಪಭೋಗಿಸಬಾರದೇ ?"

"ಉಪಭೋಗ ಮಾಡುವುದೆಂದರೇನು ?"

"ದುಡ್ಡಿದ್ದವರು ಒಂದು ಕಾರ್ ಇಟ್ಟುಕೊಳ್ಳುವುದು—ಒಂದು ಭವ್ಯ ಭವನ ಕಟ್ಟಿಕೊಳ್ಳುವುದು—ವೆಲ್ವೆಟ್ ಫರ್ ಉಪಯೋಗಿಸುವುದು."

"ಅವರು ಉಪಭೋಗಿಸುವ ದುಡ್ಡು ಯಾರದು ?"

"ಯಾರದೇನು ಬಂತು. ಅವರದೇ ?"

"ಅವರದಲ್ಲ. ವೆಸ್ಟ್ ಎಂಡಿನಲ್ಲಿ ಮೆರೆಯುವವರಿಗೆ ಹಣವೊದಗಿಸು

ವವರು ಈಸ್ಟ್ ಎಂಡಿನ ದಲಿತರು, ಶ್ರಮಜೀವಿಗಳು. ಇವರು ದಿನಕ್ಕೆ ೧೦–೧೨ ಗಂಟೆ ಗಾಳಿ, ಬೆಳಕು, ಶುಭ್ರತೆಗಳಿಲ್ಲದ ಕಾರ್ಖಾನೆಗಳಲ್ಲಿ ದುಡಿದು ಫಾಸ್ಫೊರಸ್, ಸಲ್ಫರ್ ಹೊಗೆ ಕುಡಿದು ಅಲ್ಲಿರುವವರನ್ನು, ಅರಮನೆಗೆ ಕಳುಹಿಸುತ್ತಾರೆ, ರೋಲ್ಸ್‌ರಾಯ್ಸನಲ್ಲಿ ಸುತ್ತಿಸುತ್ತಾರೆ. ಇಂಥ ಹಣವನ್ನು ಸ್ವಂತ ವಿಲಾಸಕ್ಕೆ ಉಪಭೋಗಿಸುವುದು ನೀತಿಯೇ ?"

"ನೀವು ಸಾಮ್ಯವಾದಿಗಳ ಹಾಗೆ ಮಾತಾಡುತ್ತಿರುವಿರಿ ?"

"ಸತ್ಯವಾದವೆಲ್ಲಾ ಸಾಮ್ಯವಾದ ಕಾಂತಾ. ಕೃಷ್ಣನಿಗಿಂತಲೂ ಸಾಮ್ಯವಾದಿ ಬೇಕೇ ? ರಾಜಕುಮಾರ ಬಾಲ್ಯವನ್ನೆಲ್ಲಾ ಹಾಲುಬೆಣ್ಣೆ ಮಾರುವ ಗೊಲ್ಲಗೊಲ್ಲಿತಿಯರೊಂದಿಗೆ ಕಳೆಯುತ್ತಾನೆ – ಮುಂದಿನ ಬಾಳನ್ನು ಅನ್ನನೀರು ಬಿಟ್ಟು ಯುದ್ಧ ತಲೆದೋರದಿರಲು ಶ್ರಮಿಸುತ್ತಾನೆ – ಕೊನೆಗೆ ವೀರವಿರಾಗಿಯಂತೆ ತನ್ನ ಪಾರ್ಥಿವಶರೀರ ಕೂಡ ಇತರರಿಗೆ ಸಿಗದಂತೆ ಅರಣ್ಯದಲ್ಲಿ ದೇಹ ತ್ಯಜಿಸುತ್ತಾನೆ. ಕೃಷ್ಣನಿಗೆ ಸಂಪತ್ತಿಗೆ ಕಡಿಮೆಯೇ ? ರಾಜಾಧಿರಾಜರು ಅವನ ಪಾದಸೇವೆಗೆ ನಿಂತಿದ್ದರು. ಕುರುಕ್ಷೇತ್ರ ಯುದ್ಧವನ್ನು ಗೆದ್ದು ನಿಂತಿದ್ದ. ಆದರೆ ಆ ಸಿಂಹಾಸನ....ಯಾವ ಸಿಂಹಾಸನವೂ ಬೇಡವೆಂದ. ನಾಳಿನ ಜಗತ್ತಿಗೆ ಶಾಂತಿಯ ಬೆಳಕನ್ನು ಕೊಡುವುದು ಈ ಮಹಾತ್ಮನ ಜೀವಿತಾದರ್ಶ. ಪಾಶ್ಚಾತ್ಯ ದೇಶಗಳು ಭೋಗದ ಬೆನ್ನುಬಿದ್ದು ನಾಶವನ್ನು ತಂದುಕೊಂಡಿವೆ. ಮೊನ್ನೆಯಾದ ಮಹಾಯುದ್ಧಕ್ಕಿಂತ ಹೆಚ್ಚಿನ ನಿದರ್ಶನ ಬೇಕೇ ? ಇಂಥ ಭೋಗ ಸಿದ್ಧಾಂತವನ್ನು ಭಾರತ ಅನುಕರಿಸಲೆತ್ನಿಸಿದೆ. ಇದರಿಂದ ಭಾರತಕ್ಕೆ ಕಲ್ಯಾಣವಾದೀತೇ ? **ತ್ಯಾಗ ಕರೆದೊಯ್ಯುವುದು ಮುಕ್ತಿಗೆ; ಭೋಗ ಎಳೆದೊಯ್ಯುವುದು ಮೃತ್ಯುವಿಗೆ.**"

ಆಕೆಯ ಮಾತುಗಳನ್ನು ಪ್ರತಿಭಟಿಸುವ ಧೈರ್ಯ ಯಾರಿಗೂ ಆಗಲಿಲ್ಲ. ಕಾಂತಾ ದೀರ್ಘವಾಗಿ ಯೋಚಿಸುತ್ತ ಕುಳಿತುಬಿಟ್ಟಳು. ರಂಗಸ್ವಾಮಿ ಸಿಗರೇಟ್ ಹಚ್ಚುವ ನೆಪಮಾಡಿಕೊಂಡು ಹೊರಗೆ ಹೋದ.

"ನನ್ನ ಮಾತು ಕೇಳಿ ಕೋಪ ಬಂತೇ ಕಾಂತಾ"

ಎಂದು ಫ್ಲೋರಾ ಸ್ನೇಹಪೂರ್ಣವಾಗಿ ಕೇಳಿದಳು.

"ಇಲ್ಲ ಅತ್ತಿಗೆ – ನೀವು ಹೇಳಿದುದು ವಿಚಾರ ಕೆರಳಿಸಿತು."

"ಬಾ ಕುಮುದಾ – ಆಲೂಗೆಡ್ಡೆ ಸುಲಿಯುವುದಿದೆ"

ಎಂದು ಕುಮುದನನ್ನು ಕರೆದುಕೊಂಡು ಅಡಿಗೆಯ ಮನೆಗೆ ಫ್ಲೋರಾ ಹೋದಳು.

ಪ್ರವಾಸ ಕಾಂತಳಿಗೆ ಸುಖಪ್ರದವಾಯಿತೋ ಇಲ್ಲವೋ, ಅದರಿಂದ ಧನ್ಯನಾದವನು ರಂಗಸ್ವಾಮಿ. ತಮ್ಮನ್ನು ಬರಮಾಡಿಕೊಳ್ಳುವುದಕ್ಕೆ ಫ್ಲೋರಾನೇ ಕಾರಣ ಎಂದು ತಿಳಿದ ಮೇಲಂತೂ ಆಕೆ ಬಗ್ಗೆ ಅವನ ಗೌರವ ಇಮ್ಮಡಿಸಿತು.

ಕ್ರಮಕ್ರಮೇಣ ಕಾಂತನೂ ಅತ್ತಿಗೆಯ ಜತೆ ಅದೂ ಇದೂ ಕೆಲಸ ಮಾಡುವುದನ್ನಾರಂಭಿಸಿದಳು. ಕುಮುದ ಪೌಡರ್ ಕೇಳಿದರೆ ಏಕೋ ಏನೋ "ಶೂಶ್" ಅನ್ನುತ್ತಿದ್ದಳು.

ಇದ್ದ ಆರು ತಿಂಗಳಲ್ಲಿ ಫ್ಲೋರಾ ಅವರಿಗೆ ಲಂಡನ್ ನಗರವನ್ನಲ್ಲದೆ, ಸುತ್ತಮುತ್ತಲಿನ ಊರುಗಳನ್ನೂ ತೋರಿಸಿದಳು. ಎಲ್ಲರೂ ಕೂಡಿ ಒಂದು ವಾರ 'ಪ್ಯಾರಿ'ಗೆ (Paris) ಹೋಗಿ ಫ್ರಾನ್ಸ್ ನೋಡಿ ಬಂದರು.

ಅತಿಥಿಗಳು ಹೊರಡಲನುವಾದರು. ಚಂದ್ರ ಅವರ 'ಪ್ಯಾಸೇಜ್ ಬುಕ್' ಮಾಡಿದ. ಉಡುಗೊರೆಯೆಂದು ಫ್ಲೋರಾ ಕಾಂತ, ಕುಮುದ ನಿಗೆ ಒಂದೊಂದು ಫರ್ ಅಂಗಿಯನ್ನು ತಂದುಕೊಟ್ಟಳು.

ಪ್ರಯಾಣದ ದಿನ ಬಂತು. ಎಲ್ಲರ ಕಣ್ಣಲ್ಲಿಯೂ ನೀರು. ಫ್ಲೋರಾ ಬಿಕ್ಕಿಬಿಕ್ಕಿ ಅತ್ತಳು. ಅವಳನ್ನಪ್ಪಿ ಒಂದೇ ಸಮನೆ ಕುಮುದ ಕಣ್ಣೀರ್ಗರೆದಳು.

"ಯಾವಾಗ ಬರುತ್ತೀರಿ ಅತ್ತಿಗೆ, ಅಣ್ಣನನ್ನು ಕರೆದುಕೊಂಡು."

"ಒಮ್ಮೆ ಖಂಡಿತ ಬರುತ್ತೇವೆ ಕುಮುದಾ. ನೀನೂ ಕಾಂತಕ್ಕ ಆಗ ನನಗೆ ಹಿಂದೂಸ್ಥಾನ ಎಲ್ಲಾ ತೋರಿಸಬೇಕು."

"ಖಂಡಿತವಾಗಿ ಬರುವಿರಾ?" ಎಂದು ಕಾಂತಾ ಕೇಳಿದಳು.

ಅವಳನ್ನಪ್ಪಿ ಫ್ಲೋರಾ

"ಖಂಡಿತ ಬರುತ್ತೇವೆ, ಡಿಯರ್. ಕಾಗದ ಬರೆಯುತ್ತಿರಿ"

ಎಂದಳು. ರಂಗಸ್ವಾಮಿ ಫ್ಲೋರಾ ಕೈಕುಲುಕಿಸಿ

"ಭಾರತದ ಹಿರಿಯ ಮಗಳಮ್ಮಾ ನೀನು ಫ್ಲೋರಾ" ಎಂದ.

ಟ್ಯಾಕ್ಸಿಗೆ ಸಾಮಾನುಗಳನ್ನು ಒಯ್ದುದ್ದಾಯಿತು. ಅಗಲುವ ವೇಳೆ ಬಂತು. ಕಾಂತಾ ಫ್ಲೋರಾ ಕಾಲುಮುಟ್ಟಿ ನಮಸ್ಕಾರ ಮಾಡಿ

"ತಾಯೀ – ನೀನೇ ನನ್ನ ಗುರು"

ಎಂದಳು.

ಅವರನ್ನು ಕಳುಹಿಸಿಕೊಟ್ಟು ಚಂದ್ರ ಮನೆಗೆ ಬಂದು ಕುಳಿತ. ಅವನ ಮುಖದಲ್ಲಿ ಕಳೆಯಿರಲಿಲ್ಲ. ಫ್ಲೋರಾ ಹತ್ತಿರ ಬಂದು ಕುಳಿತು ಅವನನ್ನಪ್ಪಿದಳು. ಅವಳ ಕಣ್ಣಲ್ಲಿ ನೀರು

"ಡಾರ್ಲಿಂಗ್" ಎಂದಳು.

"ಏನು ಸ್ವೀಟ್ (Sweet)"

"ನಾಲ್ಕು ದಿವಸ ಏವನ್‌ಗೋ ಎಲ್ಲಿಗಾದರೂ ಹೋಗಿ ಬರೋಣವೆ?"

"ಏಕೆ?"

"ಮನೆ ಏತಕ್ಕೋ ಬಿಕೋ ಎನ್ನುತ್ತಿದೆ. ಎಲ್ಲರನ್ನೂ ಕಳುಹಿಸಿಕೊಟ್ಟು ಒಬ್ಬಳೇ ಇರಲಾರೆ"

ಎಂದಳು. ಚಂದ್ರನ ಕಣ್ಣುಗಳಿಂದ ಉದುರಿದ ಹನಿಗಳೇ ಫ್ಲೋರಾಗೆ ಉತ್ತರವಿತ್ತವು.

"ಡಾರ್ಲಿಂಗ್"

ಚಂದ್ರ ಅವಳ ಕಡೆ ಕಣ್ಣು ಹೊರಳಿಸಿದ.

"ನಾವೂ ಬೇಗ ಭಾರತಕ್ಕೆ ಹೋಗುವೆವಲ್ಲವೇ?"

"ಹೋಗುತ್ತೇವೆ ಡಾರ್ಲಿಂಗ್, ಇಷ್ಟು ಆತುರವೇಕೆ?"

"ನಾನು ಹುಟ್ಟಿದ್ದು ಐರ್ಲೆಂಡ್ – ಬೆಳೆದದ್ದು ಇಂಗ್ಲೆಂಡ್ – ಸಾಯಬೇಕೆಂದು ಬಯಸುವುದು ಭಾರತದಲ್ಲಿ – ಆ ನನ್ನ ಕೃಷ್ಣನ ಕರ್ಮಭೂಮಿಯಲ್ಲಿ........"

"ತಥಾಸ್ತು" ಎಂದ.



# ಗಿರಿಜವ್ವನ ರೊಟ್ಟಿ

ಖಾನಾಪುರ ಸ್ಟೇಷನ್ ಸುಟ್ಟು, ಅಲ್ಲಿದ್ದ ಹಣವನ್ನು ಕೊಳ್ಳೆಹೊಡೆದು ಕೊಂಡು ಹೋದಮೇಲೆ ಅಲ್ಲಿ ಪೋಲೀಸ್ ಕಾವಲು ಬಲ ವಾಯಿತು. ಸ್ಟೇಷನ್ ತುಂಬ ಶಸ್ತ್ರಸಜ್ಜಿತರಾದ ಸಮವೇಷಧಾರಿಗಳು ನಿಂತಿರುತ್ತಿದ್ದರು. ಅಲ್ಲಿ ರೈಲು ಹತ್ತುವುದು, ಇಳಿಯುವುದು ಎರಡೂ ಕಷ್ಟವಾಗಿತ್ತು. ಸ್ವಲ್ಪ ಅನುಮಾನ ಬಂದರೆ ಸಾಕು ಡಿಫೆನ್ಸ್ ಆಫ್ ಇಂಡಿಯಾ ಕಾಯಿದೆಯನ್ನು ಚಾಚಿ ಜನರನ್ನು ದಸ್ತಗಿರಿ ಮಾಡುತ್ತಿದ್ದರು. ಜನತೆಯ ಮೇಲೆ ಭಯದ ಮಂಕು ಚೆಲ್ಲಿ ಅವರನ್ನು ನಿಷ್ಕರುಣೆಯಿಂದ ಆಳುತ್ತಿತ್ತು ಬಿಳೀ ಸರ್ಕಾರ.

ಸರ್ಕಾರದ ರಾಕ್ಷಸೀ ವ್ಯಾಪಾರಕ್ಕೆ ದೇಶ ರೋಸಿ ಹೋಗಿತ್ತು. ಯಾರ ಬಾಯಲ್ಲಿ ನೋಡಿದರೂ 'ಭಾರತ ಬಿಟ್ಟು ತೊಲಗಿ' ಎಂಬ ರಣ ನಾದ. ಮೊಲೆಯೂಡುವುದನ್ನು ಅದೇ ಬಿಟ್ಟಿದ್ದ ಮಕ್ಕಳು ಕೂಡ 'ಕ್ರಾಂತಿಗೆ ಜಯವಾಗಲಿ' ಎಂದು ಘೋಷಿಸುತ್ತಿದ್ದರು. ಜನತೆಯಲ್ಲಿ ಹೊಸ ರಕ್ತ

ಹುಟ್ಟಿತ್ತು. ಆ ರಕ್ತ ಚೆಲ್ಲಿಹೋದರೂ ಚಿಂತೆಯಿಲ್ಲ ಈ ಸಾರೆ ದೇಶವನ್ನು ಬಂಧವಿಮುಕ್ತ ಮಾಡಬೇಕೆಂಬ ನಿರ್ಧಾರ ಸಾರ್ವತ್ರಿಕವಾಗಿ ಹಬ್ಬಿತ್ತು.

ಸರ್ಕಾರ ಭಾವಿಸಿತು–ಇದು ನಾಲ್ಕು ಜನ ಪುಂಡರ ಗೊಂದಲವೆಂದು. ಆ ನಾಲ್ಕು ಜನರನ್ನು ಹಿಡಿದುಹಾಕಿದರೆ ಗೊಂದಲ ತಾನೇತಾನಾಗಿ ಅಡಗಿ ಹೋಗುವುದೆಂದು ಅವರ ಕಲ್ಪನೆ. ಇಂಥ 'ನಾಲ್ವ'ರನ್ನು ಸಾವಿರಗಟ್ಟಳೆ ದಸ್ತಗಿರಿ ಮಾಡಿದ್ದರು. ಚೇಳು, ಮೊಂಡರಗಪ್ಪೆ ತುಂಬಿದ ಕಾರಾಗಾರ ಗಳಲ್ಲಿ ಅವರನ್ನು ತುಂಬಿ ನರಕಯಾತನೆ ಕೊಟ್ಟರು. ಜತೆಗಾರರ ಹೆಸರು ಹೇಳಲೆಂದು ಆಪಾದಿತರನ್ನು ಚಿತ್ರಹಿಂಸೆ ಮಾಡಿದರು. ಮೈಮೂಳೆಗಳನ್ನು ಮುರಿದರು, ಗುದಕ್ಕೆ ಭರ್ಜಿ ನೆಟ್ಟರು, ಕಣ್ಣು ಕಿತ್ತು ಕೈಗಿತ್ತರು, ಗುಪ್ತಾಂಗ ಗಳನ್ನು ಛಿದ್ರಛಿದ್ರ ಮಾಡಿದರು. ಹಿಂಸೆ ಜೀರ್ಣಿಸಿಕೊಂಡವರು ಅರೆಜೀವ ಕೊರೆಜೀವವಾದರು. ಹಲವರು ಜೀರ್ಣಿಸಿಕೊಳ್ಳಲಾರದೆ 'ಇನ್‌ಕಿಲಾಬ್ ಜಿಂದಾಬಾದ್' ಎಂದು ಜಪಿಸುತ್ತಾ ಪ್ರಾಣ ಒಪ್ಪಿಸಿದರು. ಮೈರಾವಣನ ಮೈಯ್ಯಂತೆ ಬೆಳೆಯುತ್ತಿತ್ತು ಹುತಾತ್ಮರ ತಂಡ. ಇದಕ್ಕೆ ಸ್ಫೂರ್ತಿಯೆಲ್ಲಿ ಯದು? ಯಾವ ಕೇಂದ್ರದಿಂದ ಇವರಿಗೆ ಆಣತಿಗಳು ಬರುತ್ತವೆ? ಇವರ ಚಟುವಟಿಕೆಗಳ ರಚನೆ ಹೇಗೆ? ಎಂದು ಸರ್ಕಾರದ ಹುದ್ದರಿಗಳು ತಲೆ ಚಚ್ಚಿಕೊಂಡರು. ಅವರಿಗೆ ಬಗೆಹರಿಯದ ಸಮಸ್ಯೆಯಾಗೇ ಉಳಿಯಿತು ಕ್ರಾಂತಿ ಕಥೆ.

ಗಾಂಧೀ, ನೆಹರೂ, ವಲ್ಲಭಭಾಯಿ, ಶರತ್‌ಬೋಸ್ ಮೊದಲಾದ ನಾಯಕರನ್ನು ಹಿಡಿದು ಬಂಧನದಲ್ಲಿಟ್ಟಿದ್ದರು. ಆದರೂ ಕ್ರಾಂತಿ ಸಾಗು ತ್ತಿತ್ತು. ಹಾಗಾದರೆ ನಾಯಕರು ಬೇರೆ ಇರುವರೇ? – ಅವರು ಯಾರು– ಎಲ್ಲಿದ್ದಾರೆ? ಎಂದು ಸರ್ಕಾರ ಶೋಧಿಸತೊಡಗಿತು.

೧೯೪೨ರಿಂದ ಭಾರತದ ರಾಜಕಾರಣ ಒಂದು ವಿಲಕ್ಷಣ ಸ್ವರೂಪ ವನ್ನು ತಾಳಿತ್ತು. ಅಂದಿನವರೆಗೆ ದೇಶ, ನಾಯಕರ ಮಾತು ಕೇಳಿ ಅವರು ಹೇಳಿದಂತೆ ಮಾಡಿತ್ತು. ಸ್ವರಾಜ್ಯ ಸಿಕ್ಕುವ ದಿನದ 'ಮುಹೂರ್ತ' ಹೇಳಿ ಹೇಳಿ ಗಾಂಧೀಜಿ ಬೇಸತ್ತಿದ್ದರು. ಗಾಂಧೀಜಿಯ ಅಹಿಂಸಾತತ್ತ್ವವನ್ನು ೨೦ ವರ್ಷಕಾಲ ಆಚರಣೆಯಲ್ಲಿ ತಂದು, ತನುಮನಧನವನ್ನು ಸೂರೆ ಗೊಟ್ಟ ಜನಕ್ಕೆ ಆದರಲ್ಲಿ ನಂಬಿಕೆ ಕಡಿಮೆಯಾಗುತ್ತ ಬಂದಿತ್ತು. 'ಕತ್ತಿ

ಯಿಂದ ಗೆದ್ದ ರಾಜ್ಯವನ್ನು ಕತ್ತಿಯಿಂದಲೇ ಉಳಿಸಿಕೊಳ್ಳುತ್ತೇವೆ' ಎಂದು ಸಾರಿದ ಸಾಮ್ರಾಜ್ಯಶಾಹಿ ಕಲಿಯುಗದ ಗೌತಮನ ಪ್ರಿಯಮಾರ್ಗಕ್ಕೆ ಮಣಿಯುತ್ತದೆಯೇ? ಗಾಂಧಿ, ನೆಹರೂ, ಬೋಸರನ್ನು ಸಾಧಾರಣ ಕಳ್ಳ ಕಾಕರಂತೆ ಸೆರೆಹಿಡಿದು ಜನತೆಯ ಅಸಮಾಧಾನವನ್ನು ಹುಲ್ಲಿಗಿಂತಲೂ ಕಡೆಯಾಗಿ ಭಾವಿಸುತ್ತಿದ್ದ ಸರ್ಕಾರ 'ಅಹಿಂಸೆ'ಗೆ ಶರಣೆನ್ನುತ್ತದೆಯೇ?

ಸಮ್ರಾಜ್ಯ ಸರ್ಕಾರದ ಸಿಂಹಪೀಠವನ್ನು ಅಲುಗಾಡಿಸಲು ಭಾರತ ೧೯೪೨ರಲ್ಲಿ ನಿರ್ಧರಿಸಿತು. ನಿರುಪದ್ರವಿ ಜನ ಕೆರಳಿ ನಿಂತರು. ಎಷ್ಟು ದಿನ ಈ ಕ್ಷಾಮ, ಈ ರೋಗ, ಈ ಅನ್ಯಾಯ, ಈ ಅತ್ಯಾಚಾರಗಳನ್ನು ಸಹಿಸುವುದು ಎಂದು ಜನ ಕೆಂಡ ಕೆಂಡವಾದರು. ಕ್ರಾಂತಿಯ ಕಿಡಿ ದೇಶಾದ್ಯಂತ ವ್ಯಾಪಿಸಿತು. ಪೆಷಾವರದಿಂದ ಕನ್ಯಾಕುಮಾರಿಯವರೆಗೂ ಒಂದೇ ನಿರ್ಧಾರ—"ಬಾಳುವುದಾದರೆ ಮನುಷ್ಯರಂತೆ ಬಾಳೋಣ—ಸ್ವತಂತ್ರ ಭಾರತದಲ್ಲಿ ಉಸಿರಾಡೋಣ—ಈ ಶಿಖಂಡಿ ಬಾಳು ಸಾಕು—ಸತ್ತರೂ ಚಿಂತೆಯಿಲ್ಲ, ಹೇಡಿಯ ಬಾಳುವೆ ಬೇಡ."

ಸಮ್ರಾಜ್ಯ ಸರ್ಕಾರ ಬಹು ವಿಚಿತ್ರವಾಗಿ ತನ್ನ ವ್ಯಾಪ್ತಿಯನ್ನು ಬೆಳಸಿತ್ತು. ಸರ್ಕಾರದ ಮೂಲಕ್ಷೇತ್ರ ೧೦, ಡೌನಿಂಗ್ ಸ್ಟ್ರೀಟ್. ಆದರ ಭಾರತಮುಖವಾಗಿ ಕೆಲಸಮಾಡುತ್ತಿದ್ದವರು ಡೆಲ್ಲಿಯಲ್ಲಿದ್ದ ವೈಸರಾಯರು, ಅವರ ಐ.ಸಿ.ಎಸ್.—ಐ.ಪಿ. ದಳ. ಆದರೆ ಸರ್ಕಾರ ನಡೆಯುತ್ತಿದ್ದುದು ವೈಸರಾಯರ ಬಲದ ಮೇಲೂ ಅಲ್ಲ, ಅವರ ಕಾರ್ಯಸಮಿತಿಯಲ್ಲಿದ್ದ ಪಂಚಮುದಳದ ಅಧಿಕಾರಿಗಳಿಂದಲೂ ಅಲ್ಲ. ಸರ್ಕಾರದ ಬುನಾದಿ ಭಾರತದ ಹಣ ಸಂಗ್ರಹಿಸಿ ವಿಲಾಯಿತಿಗೆ ಸಾಗಿಸುತ್ತಿದ್ದ ಮಾಮಲೇದಾರ್, ಕುಲಕರ್ಣಿ, ಪಾಟೀಲರು ಮತ್ತು ಅವರಿಗೆ ತಮ್ಮ ಬಂದೂಕಿನ ಬಲವಿತ್ತಿದ್ದ ಪೋಲೀಸ್ ಇನ್ಸ್‌ಪೆಕ್ಟರುಗಳು, ಫೌಜುದಾರರು, ಸಿಪಾಯಿಗಳು. ಡಿಫೆನ್ಸ್ ಆಫ್ ಇಂಡಿಯಾ ಕಾಯಿದೆ ಅವರಿಗೆ ಸಿಂಹಬಲವಿತ್ತಿತ್ತು. ಪ್ರತಿಯೊಬ್ಬ ಪೋಲೀಸ್ ಪ್ಯಾದೆ, ಫೌಜುದಾರನೂ ತಾನೇ ಭಾರತದ ಚಕ್ರವರ್ತಿ ಎನ್ನುವ ಮನೋಭಾವ ತೋರಿಸುತ್ತಿದ್ದ. ದೇಶಸೇವಕರನ್ನು ಬಗ್ಗುಬಡಿದ ಫೌಜುದಾರರು 'ರಾವ್‌ಸಾಹೇಬ'ರಾಗುತ್ತಿದ್ದರು. ಅವರಿಗೆ ಹಲವು ಮಾನ, ಸನ್ಮಾನಗಳನ್ನು ಸರ್ಕಾರ ಕೊಡುತ್ತಿತ್ತು.

ಇಂಥ ಶನಿಸಂತಾನಕ್ಕೆ ಸೇರಿದವನು ಗುರುಬಸಪ್ಪ. ಸಾಧಾರಣ ಪೋಲೀಸ್ ಪ್ಯಾದೆಯಾಗಿದ್ದವನು ತನ್ನ ರಾಜಭಕ್ತಿ, ಕರ್ತವ್ಯನಿಷ್ಠೆಗಳಿಂದ ಇನ್‌ಸ್ಪೆಕ್ಟರ್ ಆಗಿದ್ದ. ಆದರೆ ಗುರುಬಸಪ್ಪನಿಗೂ ಇತರ ಪೋಲೀಸ್ ಅಧಿಕಾರಿಗಳಿಗೂ ಒಂದು ವ್ಯತ್ಯಾಸವಿತ್ತು. ಬ್ರಿಟಿಷ್ ಸರ್ಕಾರ ಹಿಂದೂ ಸ್ಥಾನದಲ್ಲಿರುವುದು ಹಿಂದೂಸ್ಥಾನದ ಪುಣ್ಯ.... ಎಂದು ಬಿಳಿಯರಸರು ಭಾರತ ಬಿಟ್ಟು ತೊಲಗುತ್ತಾರೋ ಅಂದು ಭಾರತ ಅನಾಯಕವಾಗಿ ರಕ್ತದ ಕೋಡಿ ಹರಿಸುತ್ತದೆ ಎಂದು ಅವನು ತ್ರಿಕರಣಪೂರ್ವಕವಾಗಿ ನಂಬಿದ್ದ. ಇಲ್ಲದ ಕೋಲಾಹಲವೆಬ್ಬಿಸುತ್ತಿದ್ದ ಗಾಂಧಿ, ನೆಹರೂ, ಬೋಸ್, ಜೈಪ್ರಕಾಶರನ್ನು ಸರ್ಕಾರ ಸುಮ್ಮನೆ ಗುಂಡಿನ ಬಾಯಿಗೆ ಕೊಡದೆ ಇರುವುದು ದೌರ್ಬಲ್ಯದ ಚಿನ್ಹೆಯೆಂದು ಅವನ ಅಭಿಮತ.

ರಾಜಕೀಯ ಕ್ರಾಂತಿಗಾರರ ಗೂಡುಗಳನ್ನು ಹುಡುಕಿ ಅವರನ್ನು ಹಿಡಿದು ತರುವುದರಲ್ಲಿ ಗುರುಬಸಪ್ಪ ವಿಖ್ಯಾತನಾಗಿದ್ದ. ಅವನ ಬುದ್ಧಿ, ಚಮತ್ಕಾರ, ಸಾಹಸವೆಲ್ಲಾ ಕ್ರಾಂತಿಕಿಡಿಯನ್ನು ಆರಿಸುವುದಕ್ಕೆ ನಿವೇದಿತವಾಗಿತ್ತು.

ಖಾನಾಪುರದ ಸಮೀಪದ ಕಾಡಿನ ಮಧ್ಯೆ ಒಂದು ತಂಡ ಸೇರಿಕೊಂಡಿದೆಯೆಂದೂ, ಅವರೇ ಎಲ್ಲ ಘಟನೆಗಳಿಗೂ ಕಾರಣರೆಂದು ಗುರುಬಸಪ್ಪನಿಗೆ ಸುದ್ದಿ ಬಂತು. ಕೂಡಲೇ ಡ್ರೆಸ್ ಹಾಕಿಕೊಂಡು, ಸೊಂಟಕ್ಕೊಂದು ರಿವಾಲ್ವರ್ ಸಿಕ್ಕಿಸಿಕೊಂಡು ಓಡಿದ. ಗಿರಿಜವ್ವ ಅದೇ ಬಿಸಿಬಿಸಿಯಾಗಿ ಮಾಡಿದ್ದ ರೊಟ್ಟಿ, ಖಾರಬೇಳೆ ಕೂಡ ಅವನಿಗೆ ಬೇಡವಾಯಿತು.

"ಬರುವುದು ಯಾವಾಗಲೋ ಏನೋ ರೊಟ್ಟಿ ಕಟ್ಟಿಕೊಡಲೇ?" ಎಂದು ಕೇಳಿದಳು.

"ಏನೂ ಬೇಡ–ಕೆಲಸದ ಮೇಲಿದ್ದಾಗ ನನ್ನ ಹಸಿವೇ ಆಗುವುದಿಲ್ಲ" ಎಂದು ಹೆಂಡತಿಗೆ ಹೇಳಿದ.

ಗಿರಿಜವ್ವ ಶಿವಪೂಜೆ ಮುಗಿಸಿ, ತಾನೊಂದು ರೊಟ್ಟಿ ಕಡಿದು ಗಂಡನಿಗೆ ಒಲೆಯ ಮೇಲೆ ಬಿಸಿಯಾಗಿ ರೊಟ್ಟಿ, ಖಾರಬೇಳೆ, ಚಟ್ಣಿ ಮುಚ್ಚಿಟ್ಟು ಮಲಗಲು ಹೋದಳು.

ಕಗ್ಗತ್ತಲೆ ರಾತ್ರಿ. ಅಮಾವಾಸ್ಯೆ ಒಂದೆರಡು ದಿನಕ್ಕಿದ್ದರೂ ಅಂದೇ

ಅಮಾವಾಸ್ಯೆಯೆಂದು ಭಾಸವಾಗುವಂಥ ರುದ್ರಕತ್ತಲೆ. ದೂರದಲ್ಲಿ ಕೆಲವು ನಾಯಿಗಳು ಭೀಕರ ಸ್ವರದಲ್ಲಿ ಚೀತ್ಕಾರ ಮಾಡುತ್ತಿದ್ದವು. ಅಷ್ಟೇ ಭೀಕರವಾಗಿ ಗೂಗೆಯೊಂದು ಆರ್ತನಾದ ಮಾಡುತ್ತಿತ್ತು. ಪ್ರಕೃತಿ ಅಂದು ವಿಧವೆಯಂತೆ ನಿಂತಿದ್ದಳು. ಆ ಭೀಕರ ನಾದಗಳ ಹಿನ್ನೆಲೆಯಲ್ಲಿ ಒಂದು ಬಗೆಯ ಗಭೀರ ಮೌನ. ಚೀರಾಟ, ಚೀತ್ಕಾರವಿದ್ದರೂ ಚಿಂತೆಯಿಲ್ಲ – ಈ ಮೌನ ಬೇಡ ಎನ್ನುವಂತಿತ್ತು.

ಮಲಗಿದ ಕೂಡಲೆ ನಿದ್ದೆಗೆ ಮಾರುಹೋಗುತ್ತಿದ್ದ ಗಿರಿಜವ್ವನಿಗೆ ಅಂದು ನಿದ್ದೆ ಹತ್ತದು. ಏನು ಏನೋ ಚಿಂತೆ ಆಕೆಯ ಶಾಂತಿಭಂಗಮಾಡಿದ್ದವು. ಪ್ರಾಣದ ಹಂಗುದೊರೆದು ದುಡಿಯುತ್ತಿದ್ದ ದೇಶಭಕ್ತರ ಮೇಲೆ ಗಂಡ ಇಂತು ಧಾಳಿ ಮಾಡುವುದು ಒಳ್ಳೆಯದೇ ಎಂದಾಕೆ ಯೋಚಿಸುತ್ತಿದ್ದಳು.

"ಗಂಡನಿಗೇನಾದರೂ ಅಪಾಯ ತಗುಲಿದರೋ?" ಎಂದು ಯೋಚಿಸುವಳು. "ಛೆ! ಛೆ! ಅಂಥ ಯೋಚನೆ ಮಾಡುವುದೂ ತಪ್ಪು– ಸಿದ್ದೇಶ್ವರ ಅವರನ್ನು ಕಾಪಾಡುತ್ತಾನೆ."

"ಇತರರನ್ನು ಅವರು ಹಿಂಸೆಮಾಡುತ್ತಾರಲ್ಲಾ!"

"ಕರ್ತವ್ಯ – ತಮ್ಮ ಸ್ವಂತ ಲಾಭಕ್ಕೆ ಮಾಡುತ್ತಾರೆಯೆ? ಪಗಾರ ತೆಗೆದುಕೊಳ್ಳುವಾಗ ದುಡಿಯಬೇಕಾದುದು ಕರ್ತವ್ಯವಲ್ಲವೇ?"

ಎಂದು ಸಮಾಧಾನ ಮಾಡಿಕೊಂಡಳು.

ಹಿತ್ತಲು ಬಾಗಿಲ ಹತ್ತಿರ ಏನೋ ಶಬ್ದವಾದ ಹಾಗಾಯಿತು.

"ಯಾರು?" ಎಂದಳು.

ಮಾರುತ್ತರ ಬರಲಿಲ್ಲ.

'ಬೆಕ್ಕಿರಬೇಕು' ಎಂದುಕೊಂಡು ಮತ್ತೆ ಮಲಗಿದಳು. ಯಾರೋ ಬಾಗಿಲು ತಟ್ಟಿದಂತಾಯಿತು.

"ಯಾರು?" ಎಂದು ಕೂಗಿದಳು.

"ಅವ್ವಾ........"

"ಯಾರು? ಈ ಹೊತ್ತಿನಲ್ಲಿ" ಎಂದು ಗದರಿಸಿದಳು.

"ಅವ್ವಾ – ಅವ್ವಾ........" ಧ್ವನಿ ಕ್ಷೀಣವಾಗಿತ್ತು.

"ಹಾಳು ಯಾರೋ?"

ಎಂದು ಕಂದೀಲು ತೆಗೆದುಕೊಂಡು ಬಾಗಿಲು ತೆಗೆದಳು. ಅವಳು ಕಂಡ ನೋಟ ಅವಳನ್ನು ಝಲ್ಲೆನಿಸಿತು. 'ಅವ್ವಾ' ಎಂದು ಕೂಗಿದವನು ಮಿಂಚಿನಂತೆ ಒಳಗೆ ಹಾರಿ ಬಾಗಿಲು ಚಿಲಕ ಹಾಕಿದ.

ಗಿರಿಜವ್ವ ಕೂಗಬೇಕೆಂದು ಯೋಚಿಸುವಷ್ಟರಲ್ಲಿ ಅವಳ ಬಾಯನ್ನು ಭದ್ರವಾಗಿ ಮುಚ್ಚಿ

"ಅವ್ವಾ – ಯಾರನ್ನೂ ಕರೆಯಬೇಡಿ. ನಾನು ನಿಮಗೆ ಯಾವ ತೊಂದರೆಯನ್ನೂ ಮಾಡುವುದಿಲ್ಲ"

ಎಂದು ಕೈಬಿಟ್ಟ. ಗಿರಿಜಾ ಅವನನ್ನು ನೋಡಿದಳು. ೨೪–೨೬ ವರ್ಷದ ಪ್ರಾಯ. ಸುದೃಢವಾದ ಆಳು, ಗಟ್ಟಿಮುಟ್ಟಾದ ದೇಹ. ಮುಖದಲ್ಲಿ ಒಂದು ಆಕರ್ಷಕ ಸಾತ್ವಿಕ ಕಳೆ. ಅವನ ತೋಳಿನ ಕಡೆ ಅವಳ ಕಣ್ಣು ಹೋಯಿತು. ಅದರಿಂದ ರಕ್ತ ಸುರಿಯುತ್ತಿದ್ದುದನ್ನು ಕಂಡಳು.

"ಇದೇನಪ್ಪಾ ಇದು."

"ಅವ್ವಾ, ಸ್ವಲ್ಪ ನೀರು ಬಟ್ಟೆ ಕೊಡಿ."

ಗಿರಿಜಾ ನೀರು ತಂದು ತಾನೇ ಗಾಯ ತೊಳೆದಳು. ಗಾಯಕ್ಕೆ ಕುಂಕುಮ ತುಂಬಿ ಬಲವಾಗಿ ಬಟ್ಟೆ ಬಿಗಿದಳು.

"ಯಾರಪ್ಪಾ ನೀನು, ಗುಂಡಿನ ಹೊಡೆತ ತಿಂದು ಬಂದಿರುವೆಯಲ್ಲಾ– ಹೇಗಾಯಿತು ಇದು."

"ಎಲ್ಲಾ ಸಾವಕಾಶ ಹೇಳುತ್ತೀನಿ. ರೊಟ್ಟಿ ಕೊಡುತ್ತೀರಾ."

ಗಿರಿಜವ್ವ ರೊಟ್ಟಿಗೆ ಖಾರಹಚ್ಚಿ ಕೈಗೆ ಕೊಟ್ಟಳು. ಅದನ್ನು ತಿಂದು ಒಂದು ತಂಬಿಗೆ ನೀರು ಕುಡಿದ.

"ಅವ್ವಾ–ನನ್ನ ಪ್ರಾಣ ಕಾಪಾಡಿದಿರಿ. ನೀವೇ ನನ್ನ ಹಡೆದವ್ವಾ. ಈ ಉಪಕಾರ ನಾನು ಎಂದಿಗೂ ಮರೆಯುವುದಿಲ್ಲ. ನನಗೆ ಈ ರಾತ್ರಿ ಇಲ್ಲಿ ಉಳಿಯಲು ಪರವಾನಗಿ ಕೊಡಿ. ಬೆಳಗು ಹುಟ್ಟುವುದಕ್ಕೆ ಮುಂಚೆ ನಾನು ಹೋಗುತ್ತೇನೆ."

"ನಾನು ಮನೆಯಲ್ಲಿ ಒಬ್ಬಂಟಿಗಳು."

"ಚಿಂತೆಯಿಲ್ಲ. ನಾನು ಕಳ್ಳಕೊರಮನಲ್ಲ—"

"ಹಾಗಾದರೆ ಗಾಂಧೀ ಜನವೆ ?"

“ಹೌದು.”

“ಏನಾಯಿತು ಅಣ್ಣಾ.”

“ಬೆಳಗಾವಿ ಖಜಾನೇಗೆ ಹಣ ಸಾಗುತ್ತಿತ್ತು. ನಾವು ಅದನ್ನು ಹಾರಿಸಿದೆವು. ಹಣ ಒಯ್ಯುವಷ್ಟರಲ್ಲಿ ಬದ್‌ಮಾಷ್ ಇನ್‌ಸ್ಪೆಕ್ಟರ್ ಗೋಳೀ ಬಾರು ಮಾಡಿದ. ನನ್ನ ಬಲಗೈಗೆ ಏಟು ಬಿತ್ತು.”

“ಇನ್‌ಸ್ಪೆಕ್ಟರಿಗೆ ಏನೂ ತೊಂದರೆಯಾಗಲಿಲ್ಲವೇ ?”

“ಅವನಿಗೇಕೆ ಆಗತ್ತೆ ತಾಯಿ – ಜತೆಯಲ್ಲಿ ನಾಲ್ಕುಜನ ಬಂದೂಕದ ಸಿಪಾಯರಿದ್ದರು.”

“ಸರ್ಕಾರದ ಹಣ ಹಾಗೆ ನೀವು ಕದಿಯಬಹುದೇ ?”

“ಆ ಹಣ ಯಾರದು ತಾಯಿ – ನಮ್ಮ ಬಡಜನದ್ದು – ಜನದ ಹಣ ಅವರಿಗೇ ಮುಟ್ಟುತ್ತೆ.”

“ಆದರೆ ಬಲಿಷ್ಠ ಸರ್ಕಾರದ ಮುಂದೆ ನಿಮ್ಮ ಆಟ ಏನು ಸಾಗುತ್ತೆ.”

“ಅವ್ವಾ........”

“ಏನಪ್ಪ........”

“ನನ್ನ ಪೋಲೀಸರ ವಶಮಾಡಬೇಡಿ.”

“ಏಕೆ ಭಯವೇ ?”

“ಭಯ ಬಿಟ್ಟೇ ನಾವು ಈ ಕೆಲಸಕ್ಕೆ ಕೈಹಾಕಿರುವುದು. ಈಗಲೇ ಸೆರೆ ಸಿಕ್ಕಿದರೆ ನಮ್ಮ ಕೆಲಸ ಅರ್ಧಮರ್ಧವಾಗುತ್ತದಲ್ಲಾ ಎಂದು ಬೇಡಿದೆ. ನನ್ನ ಪೋಲೀಸಿನವರ ವಶಮಾಡುವಿರಾ – ಓಡಿ ಹೋಗಲೂ ತ್ರಾಣವಿಲ್ಲವಾಗಿದೆ.”

“ವಶಮಾಡುತ್ತೇನೆಂದು ನಾನು ಹೇಳಿದನೇ ?”

“ಇಲ್ಲ – ಆದರೆ ನನ್ನ ಎಚ್ಚರಿಕೆಯಲ್ಲಿ ನಾನಿರಬೇಕು. ಪ್ರಮಾಣ ಮಾಡಿ.”

“ಸಿದ್ಧೇಶ್ವರನ ಆಣೆಗೂ ನಿಮ್ಮನ್ನು ಪೋಲೀಸಿನವರ ವಶಮಾಡಲ್ಲ. – ನಿಮ್ಮ ಹೆಸರೇನು ಅಣ್ಣಾ....”

“ದುಗ್ಗಪ್ಪ.”

ಬಾಗಿಲು ಧಡಧಡ ಬಡಿದ ಶಬ್ದ ಕೇಳಬಂತು. ಗಿರಿಜವ್ವ ಗಾಬರಿ ಗೊಂಡಳು.

"ನಮ್ಮ ಯಜಮಾನರು ಬಂದ ಹಾಗಿದೆ."

"ನನ್ನ ಗತಿ."

"ಹೆದರಬೇಡಿ ದುಗ್ಗಪ್ಪ–ಆ ಉಗ್ರಾಣದಲ್ಲಿ ಔತಿಟ್ಟುಕೊಳ್ಳಿ"

ಎಂದು ಅವನು ಮರೆಯಾಗಲು ಒಂದು ಕಂಬಳಿ ಒಗೆದು ಹೋಗಿ ಬಾಗಿಲು ತೆಗೆದಳು.

ಇನ್‌ಸ್ಪೆಕ್ಟರ್ ಬಂದವರೇ ಸೋತು ಹಾಗೇ ಆರಾಮಾಸನದ ಮೇಲೆ ಮಲಗಿದರು. ಗಿರಿಜಾ ಅವರ ಬೂಟ್ಸು ಬಿಚ್ಚುತ್ತ ಕುಳಿತಳು.

"ಇನ್ನೂ ಮಲಗಿಲ್ಲವೇ ಗಿರಿಜಾ."

"ಮಲಗಿದ್ದೆ – ನೀವು ಬಾಗಿಲು ತಟ್ಟಿದ್ದು ಕೇಳಿ ಎದ್ದು ಬಂದೆ."

"ಕೊನೆಗೂ ಬದ್ಮಾಷ್ ಪರಾರಿಯಾದ."

"ಯಾವ ಬದ್ಮಾಷ್."

"ಆ ದುಗ್ಗಾ—ಕಳ್ಳಕೊರಮ ಅವನೇ ಈ ಹಾವಳಿ ಗುರು."

"ಇವತ್ತು ಅವನನ್ನು ಹಿಡಿಯುವುದಕ್ಕೆ ಹೋಗಿದ್ದಿರಾ?"

"ಹೂ–ಗುಂಡೂ ಹಾರಿಸಿದೆ. ಆದರೆ ಮಿಕ ತಪ್ಪಿಸಿಕೊಂಡಿತು."

"ಹೋಗಲಿ–ಏಳಿ ಊಟಮಾಡಿ."

"ಏನೂ ಬೇಡ ಗಿರಿಜಾ–ಹಾಸಿಗೆ ಕಂಡರೆ ಸಾಕಾಗಿದೆ."

ಎಂದು ಅಂಗಿಯನ್ನು ತೆಗೆದೊಗೆದು, ರಿವಾಲ್ವರ್ ಇದ್ದ ಬೆಲ್ಟನ್ನುಕಳಚಿ ಮೇಜಿನ ಮೇಲಿಟ್ಟು ಮಲಗಿದ. ಕೂಡಲೆ ಗಾಢವಾದ ನಿದ್ರೆ ಹತ್ತಿತು.

ಉಗ್ರಾಣದ ಕದದ ಕಿಂಡಿಯಿಂದ ದುಗ್ಗಪ್ಪ ಎಲ್ಲವನ್ನೂ ಕೇಳಿಸಿ ಕೊಂಡ. ತಾನು ಆಶ್ರಯ ಹುಡುಕಿ ಬಂದದ್ದು ಹುಲಿಯ ಬೋನಿಗೆ ಎಂಬು ದವನಿಗರ್ಥವಾಯಿತು. ಉಸಿರನ್ನು ಬಿಗಿಹಿಡಿದು ಕುಳಿತ. ಗಡಿಯಾರದ ಒಂದೊಂದು 'ಟಿಕ್–ಟಿಕ್' ಶಬ್ದವೂ ಅವನ ಹೃದಯವನ್ನು ಇರಿದಂತಾ ಗುತ್ತಿತ್ತು.

ಬೆಳಕು ಹರಿಯಿತು. ಗಂಡ ಏಳುವ ಮುನ್ನ ಗಿರಿಜಾ ಎದ್ದು ಒಂದು

ಕಪ್ ಚಹಾ ಮಾಡಿ ಗಂಡನ ಕೈಗಿತ್ತಳು. ಗುರುಬಸಪ್ಪ ಚಹಾ ಕುಡಿದು ಒಂದು ಚುಟ್ಟಾ ಹಚ್ಚಿಕೊಂಡು ಹಿತ್ತಲು ಕಡೆ ಹೊರಟ. ತಂಬಿಗೆಗೆ ನೀರು ಹಾಕಿಕೊಳ್ಳುತ್ತಾ ಅಲ್ಲಿ ಬಿದ್ದಿದ್ದ ರಕ್ತ ಕಲೆಗಳನ್ನು ಕಂಡು

"ಗಿರಿಜಾ" ಎಂದು ಕೂಗಿದ.

"ಏನು?"

"ಕೂಡಲೆ ಇಲ್ಲಿ ಬಾ."

ಗಿರಿಜಾ ಬರಲು ಅವಳಿಗೆ ರಕ್ತದ ಕಲೆ ತೋರಿಸಿ

"ಇದು ಹೇಗೆ ಬಂತು?"

"ನಾಕಾಣೆ."

ಗುರುಬಸಪ್ಪನಿಗೆ ಥಟ್ಟನೆ ನೆನಪಾಯಿತು. ಕೈಯಲ್ಲಿದ್ದ ತಂಬಿಗೆಯನ್ನು ಅಲ್ಲೇ ಒಗೆದು ಒಳಗೆ ಓಡಿ ಬಂದ. ಅವನು ಯೋಚಿಸಿದಂತೆಯೇ ಆಗಿತ್ತು-ಬೆಲ್ಟಿನಿಂದ ರಿವಾಲ್ವರ್ ಮಾಯವಾಗಿತ್ತು. ಗಿರಿಜಾ ಅದನ್ನು ಕಂಡು ಥರಥರ ನಡಗುತ್ತ ನಿಂತಳು.

"ಗಿರಿಜಾ-ರಾತ್ರಿ ಇಲ್ಲೇನು ನಡೆಯಿತು? ಯಾರು ಬಂದಿದ್ದರು."

"ಯಾರೂ ಇಲ್ಲವಲ್ಲಾ."

"ಸುಳ್ಳು ಹೇಳಿದರೆ ಚಮುಡಾ ಸುಲಿದುಬಿಡುತ್ತೇನೆ"

ಎಂದು ಕೈಗೆ ಪೋಲೀಸ್ ಬೆತ್ತ ತೆಗೆದುಕೊಂಡ.

"ಹೇಳುತ್ತೇನೆ-ಸಮಾಧಾನ ಮಾಡಿಕೊಳ್ಳಿ. ಬೆತ್ತ ಬಿಸಾಡಿ."

"ಗುರುಬಸಪ್ಪ ಬಲೆಗೆ ಬಿದ್ದ ಸಿಂಹದಂತೆ ಆರಾಮಾಸನದ ಮೇಲೆ ಕುಕ್ಕರಿಸಿದ

"ಹೇಳು" ಎಂದು ಗರ್ಜಿಸಿದ.

"ಯಾವನಿಗೋ ಕೈಗೆ ಏಟು ಬಿದ್ದಿತ್ತು. ಇಲ್ಲಿಗೆ ಬಂದ. ಅವನಿಗೆ ನೀರು ಬಟ್ಟೆ ಕೊಟ್ಟೆ."

"ಅವನ ಹೆಸರೇನು?"

"ದುಗ್ಗಪ್ಪನಂತೆ."

"ಅವನೇ-ಬದ್ಮಾಷ್—ಗಿರಿಜಾ, ನನ್ನ ನೌಕರಿ ಬಾಯಿಗೆ ಮಣ್ಣು ಹಾಕುವ ಏರ್ಪಾಡು ಮಾಡಿದೆ."

" ನೀವು ಅವನ ಮೇಲೇಯೇನು ಗೋಳೀಬಾರು ಮಾಡಿದ್ದು."

" ಹೂ–ನೋಡು, ಬದ್ಮಾಷ್ ನನ್ನ ರಿವಾಲ್ವರು ಹಾರಿಸಿಕೊಂಡು ಹೋಗಿದ್ದಾನೆ. ನಾನು ದುಗ್ಗಪ್ಪನನ್ನು ಹಿಡಿಯುವುದಕ್ಕೆ ಹೋಗುತ್ತೇನೆ– ನನ್ನ ಹೆಣ್ತಿ ಅವನಿಗೆ ಆಶ್ರಯಕೊಟ್ಟು ರೊಟ್ಟಿ ತಿನಸ್ತಾಳೆ."

" ನಾ ಮಾಡಿದ್ದು ತಪ್ಪಾಯ್ತೇ ? "

" ಎಳೇ ಮಗೂ ಹಾಗೆ ಕೇಳು. ಡಿ. ಎಸ್. ಪೀಗೆ ಇದು ತಿಳಿದರೆ ನನ್ನ ಬರ್ತರ್ಫ್ ಮಾಡ್ತಾರೆ."

" ಈ ಕೆಲಸವೇ ಬೇಡ–ಬಿಟ್ಟು ಬಿಡಿ."

" ಹಾ ! "

" ಹೌದು. ಕಂಡವರ ಮಕ್ಕಳ ಮೇಲೆ ನೀವು ಗೋಳೀಬಾರು ಮಾಡುವುದು ನನ್ನ ಮನಸ್ಸಿಗೆ ಬರೋದಿಲ್ಲ."

" ಹೇಗೆ ಬರತ್ತೆ ಹೇಳು."

" ಅವರು ನಿಮಗೆ ಏನನ್ಯಾಯ ಮಾಡಿದ್ದಾರೆ ತಿಳಿಸಿ ? "

" ಅನ್ಯಾಯವೇ–ಸರ್ಕಾರಕ್ಕೆ ದ್ರೋಹ ಮಾಡುತ್ತಿರುವುದು ಯಾವ ನ್ಯಾಯ."

" ಯಾರದೋ ಸರ್ಕಾರಕ್ಕೆ ನೀವೇಕೆ ದೇಹ ತೇಯಬೇಕು."

" ನಿನ್ನ ಸುಖವಾಗಿರಿಸುವುದಕ್ಕೆ."

" ನನಗಿಂಥ ಸುಖ ಬೇಡ. ಗಾಂಧೀ ಜನಗಳ ರಕ್ತದ ಮೇಲೆ ನನ್ನ ಸುಖ ಬೆಳಿಸಬೇಡಿ."

" ಎಂಥಾ ಹುಚ್ಚಿನೇ ನೀನು ? "

" ನೋಡಿ–ಹಿಂದೆ ಯಾವ ಜನ್ಮದ ಪಾಪದಿಂದಲೋ ನಾನು ಬಂಜೆಯಾಗಿ ಕುಳಿತಿದ್ದೀನಿ. ನೀವು ಹೀಗೆ ಕಂಡವರ ಮಕ್ಕಳನ್ನು ಕೊಲ್ಲುತ್ತಾ ಬಂದರೆ ಮುಂದೆ ಏಳೇಳು ಜನಕ್ಕೂ ನಮಗೆ ಮಕ್ಕಳಾಗೋದಿಲ್ಲ."

" ಹೋಗೇ ಹುಚ್ಚಿ "

ಎಂದು ಗುರುಬಸಪ್ಪ ಹಿತ್ತಲು ಕಡೆಗೆ ಹೊರಟ.

ಹಿಂದಿನ ರಾತ್ರಿಯ ಗೊಂದಲದಲ್ಲಿ ರಿವಾಲ್ವರ್ ಕಳೆದುಹೋಯಿ

ತೆಂದು ಗುರುಬಸಪ್ಪ ರಿಪೋರ್ಟ್ ಮಾಡಿ ಬೇರೆಯೊಂದು ರಿವಾಲ್ವರ್ ದೊರಕಿಸಿಕೊಂಡ. ಅವನ ಮನಸ್ಸು ಛಲಕ್ಕೆ ಮಿಾಸಲಾಯಿತು.

'ನನಗೆ ಮಣ್ಣು ಮುಕ್ಕಿಸಿದ ದುಗ್ಗನನ್ನು ಹಿಡಿಯದಿದ್ದರೆ ನಾನು ನಮ್ಮಪ್ಪನ ಮಗನಲ್ಲ' ಎಂದು ಶಪಥಮಾಡಿದ.

ಹಗಲಿರುಳು ಪಿಶಾಚಿಯಂತೆ ದುಗ್ಗಪ್ಪನಿಗಾಗಿ ಕಾಡು ಮೇಡು ಅಲೆದ. ಆದರೆ ಅವನ ಸುಳುಹು ಹತ್ತಲಿಲ್ಲ.

ಗುರುಬಸಪ್ಪ ಒಂದು ಹಂಚಿಕೆ ತೆಗೆದು ಅದಕ್ಕೆ ಡಿ. ಎಸ್. ಪಿ. ಅನುಮತಿಯನ್ನು ದೊರಕಿಸಿಕೊಂಡ. ಗುರುವಾರ ಖಜಾನೆ ಹಣ ಬೆಳಗಾಂವಿಗೆ ಖಾನಾಪುರದಿಂದ ಹೋಗುವುದೆಂದು ಸುದ್ದಿ ಹರಡಿತು.

ಹಣದ ಥೈಲಿಗಳ ಜತೆ ಗುರುವಾರ ಆರು ಜನ ಸಿಪಾಯರು ಹೊರಟರು. ಅವರ ಸುತ್ತಮುತ್ತ ೩೦ ಜನ ಶಸ್ತ್ರಸಜ್ಜಿತ ಸಿಪಾಯಿಗಳು ಮರೆಯಲ್ಲಿ ಹೊರಟರು. ಒಂದು ತೋಪಿನ ಬಳಿ ಬಂದಾಗ ಮರಗಳಿಂದ ೧೦-೧೨ ಜನ ಧುಮಿಕಿ ಸಿಪಾಯರನ್ನು ಸೆರೆ ಹಿಡಿದು, ಹಣದ ಥೈಲಿಗಳನ್ನು ವಶಪಡಿಸಿಕೊಂಡರು.

ಎರಡೇ ನಿಮಿಷ ಕಳೆದಿರಬಹುದು. 'ಢಂ' ಎಂದು ಶಬ್ದವಾಯಿತು. ದುಗ್ಗಪ್ಪ ಹಣದ ಥೈಲಿಯನ್ನು ಬಿಟ್ಟು ಕೆಳಗೆ ಬಿದ್ದ. ಪೋಲೀಸಿನವರು ಬಂದು ಅವನ ಗುಂಪನ್ನು ಸುತ್ತುಗಟ್ಟಿ ಕೈಗೆ ಬಳೆತೊಡಿಸಿದರು.

ಮೊದಲೇ ಗಾಯಗೊಂಡಿದ್ದ ದುಗ್ಗಪ್ಪನ ಬಲತೋಳಿನ ಮೇಲೆ ಗೋಲಿ ಹಾದು ಅವನ ಎದೆಯ ಮಾಂಸಖಂಡವನ್ನು ಹರಿದಿತ್ತು, ರಕ್ತ ಧಾರಾಕಾರವಾಗಿ ಚಿಲುಮೆಯಂತೆ ಚಿಮ್ಮುತ್ತಿತ್ತು. ಗುರುಬಸಪ್ಪ ಅವನ ಬಳಿಗೆ ಬಂದು, ನಿರಾಶ್ರಿತನಾಗಿ ಬಿದ್ದಿದ್ದ ದುಗ್ಗಪ್ಪನನ್ನು ತನ್ನ ಬೂಟ್ಸ್ ಕಾಲಿನಿಂದ ಒದ್ದು

"ಏ ದುಗ್ಗ್ಯಾ—ಬದ್ಮಾಷ್—ಏಸು ದಿವಸ ತಪ್ಪಿಸಿಕೊಂಡಿದ್ಯೆಲೇ?"

ಎಂದ. ದುಗ್ಗಪ್ಪ ಅವನನ್ನು ನೋಡಿ ಒಮ್ಮೆ ನಕ್ಕ. ತನ್ನ ಕೈಯಲ್ಲಿದ್ದ ರಕ್ತಸ್ನಾತ ರಿವಾಲ್ವರನ್ನು ತೋರಿಸಿ

"ತೊಗೊಳ್ಳಿ—ದಣ್ಯೇರೇ—ಇದು ನಿಮ್ಮದು."

ಗುರುಬಸಪ್ಪ ಅದನ್ನು ತೆಗೆದುಕೊಂಡ.

ದುಗ್ಗಪ್ಪಾ ನರಳುತ್ತ

"ದಣ್ಯೇರೇ–ಸ್ವಲ್ಪ ಇತ್ತ ಬನ್ನಿ."

"ಯಾಕ್ಲೇ........"

"ಬನ್ನಿ ಹೇಳುತ್ತೇನೆ. ಸಿಪಾಯರ್ನೆಲ್ಲಾ ಸ್ವಲ್ಪ ದೂರ ಕಳಿಸಿ."

ಆಗಲೆಂದು ಗುರುಬಸಪ್ಪ ಅವರಿಗೆ ದೂರನಿಲ್ಲಿ ಎಂದು ಆಜ್ಞೆ ಮಾಡಿದ.

"ದಣ್ಯೇರೇ–ನನ್ನ ಹಡೆದವ್ವ ಗಿರಿಜಾತಾಯಿ ಅನ್ನ ನೀಡಿ ಈ ಮಗನ್ನ ಕಾಪಾಡಿದರು. ಅವರಿಗೆ ನನ್ನ ಶರಣು ತಿಳಿಸಿಬಿಡಿ–ದುಗ್ಗ ಯಾವ ಜನ್ಮಕ್ಕೂ ತಾಯಿ ಉಪಕಾರ ಮರೆಯುಲ್ಲಾ ಎಂದು ತಿಳಿಸಿ"

ಎನ್ನುತ್ತಾ ಗುರುಬಸಪ್ಪನ ಪಾದದ ಮೇಲೆ ಹೊರಳಿ

"ದಣಿಯರೇ-ಇದು ಆ ತಾಯಿ ಪಾದಕ್ಕೆ ನನ್ನ ಶರಣಾರ್ಥಿ"

ಎಂದ. ಅವನನ್ನು ಹೊರಳಿಸಿ ನೋಡಿದಾಗ ದುಗ್ಗನ ಪ್ರಾಣ ಹಾರಿಹೋಗಿತ್ತು.

ಗುರುಬಸಪ್ಪನ ಕಣ್ಣಲ್ಲಿಯೂ ನೀರು ಜಾರಿತು.

ದುಗ್ಗಪ್ಪನನ್ನು ದಿಟ್ಟಿಸಿ ನೋಡಿ

"ದುಗ್ಗಣ್ಣಾ-ಬೂಟ್ಸ್ ಕಾಲಲ್ಲಿ ಒದೆದುದಕ್ಕೆ ಕ್ಷಮಿಸು" ಎಂದು ಅವನ ಪಾದ ಮುಟ್ಟಿ ಕಣ್ಣಿಗೊತ್ತಿಗೊಂಡ.

—ಅಂದೇ ಮನೆಗೆ ಬಂದವನು ನೌಕರಿಗೆ ರಾಜೀನಾಮೆ ಕಳಿಸಿದ. ಗಿರಿಜವ್ವ ಹೋಳಿಗೆ ಮಾಡಿ ಗಂಡನಿಗೆ ನೀಡುವುದನ್ನು ಮರೆಯಲಿಲ್ಲ. ಅಣ್ಣ ದುಗ್ಗಪ್ಪನ ನೆನಪು ಬಂದು ಅವಳ ಗಂಟಲಲ್ಲಿ ತುತ್ತಿಳಿಯಲಿಲ್ಲ.



# ಅಗ್ನಿಕನ್ಯೆ

"ಬಿನಯ್ ಪತ್ರವೇ ಬರೆದಿಲ್ಲವಲ್ಲ. ತಾರಿಗೂ ಅವನಿಂದ ಉತ್ತರವಿಲ್ಲ."

"ನನಗೇಕೋ ಭಯವಾಗುತ್ತಿದೆ."

"ನಾನು ಕಲ್ಕತ್ತೆಗೆ ಹೋಗಿ ಬರಲೇ."

"ಅಲ್ಲಿ ಹೊಡೆದಾಟ ನಡೆದಿದೆಯಂತೆ. ನೀವೂ ಹೋಗಿ ಅಲ್ಲಿ ಸಿಕ್ಕಿಹಾಕಿಕೊಂಡರೆ ಗತಿಯೇನು?"

"ತಾಯಿ ಚಡಪಡಿಸುತ್ತಿದ್ದಾಳೆ."

"ನೀವು ಹೋಗಬೇಡಿ-ಬೇಕಾದರೆ ಒಬ್ಬ ಆಳನ್ನು ಕಳುಹಿಸಿ."

ಎಂದು ಬೀಣಾಪಾಣಿ ಗಂಡನಿಗೆ ಹೇಳಿದಳು. ಸುನೀಲ ಬಾಬುವಿಗೆ 'ಅತ್ತ ಕೆರೆ-ಇತ್ತ ಭಾವಿ' ಯಾಯಿತು. ತಮ್ಮನ ಯೋಗ ಕ್ಷೇಮ ನೋಡಿಬರಲು ಕಲ್ಕತ್ತೆಗೆ ಹೋಗಿಬರುವಂತಿರಲಿಲ್ಲ; ಇತ್ತ ಹೆಂಡತಿಯನ್ನು ಬಿಟ್ಟು ಹೋಗುವಂತೆಯೂ ಇರಲಿಲ್ಲ.

ಬೀಣಾಪಾಣಿಗೆ ಬಹಳ ದಿವಸಗಳಿಂದ ಸಣ್ಣ ಜ್ವರ ಬರುತ್ತಿತ್ತು. ಸಂಜೆಯಾಗುತ್ತಲೂ ಮೈ ಸ್ವಲ್ಪ ಬಿಸಿಯಾಗುತ್ತಿತ್ತು. ಜ್ವರ ಇದೆಯೋ

ಇಲ್ಲವೋ ಎನ್ನುವಷ್ಟು ಸಣ್ಣದು : ಆದರೆ ಅದು ಆಕೆಯನ್ನು ತುಂಬ ನಿಶ್ಶಕ್ತಳನ್ನಾಗಿ ಮಾಡುತ್ತ ಬಂದಿತ್ತು. ಕವಿರಾಜರು 'ಈಗಾಗಲೆ ಎಚ್ಚರ ತೆಗೆದುಕೊಳ್ಳದಿದ್ದರೆ ಮುಂದೆ ಇದು ಕ್ಷಯಕ್ಕೆ ತಿರುಗಬಹುದು' ಎಂದು ಹೆದರಿಸಿದ್ದರು. ಮನೆಯಲ್ಲಿ ಔಷಧ ಪಥ್ಯ ನಡೆದಿತ್ತು.

ಬೆಳಿಗ್ಗೆ ಶುಭ್ರ ವಾತಾವರಣದಲ್ಲಿ ದಿನಾ ಹೋಗಿಬಂದರೆ ಆರೋಗ್ಯಕ್ಕೆ ಒಳ್ಳೆಯದು ಎಂದು ಕವಿರಾಜರು ಹೇಳಿದ್ದರು. ಸುನೀಲ ಮುಂಜಾನೆ ಎದ್ದು ಹೆಂಡತಿಯನ್ನು ತಿರುಗಾಡಿಸಿಕೊಂಡು ಬರಲು ಕರೆದುಕೊಂಡು ಹೋಗುತ್ತಿದ್ದ. ಅವರು ಹಿಂತಿರುಗುವ ಹೊತ್ತಿಗೆ ತಾಯಿ ಗಾಯಿತ್ರಿದೇವಿ ನೀರು ಕಾಸಿ, ಚಹಾ ಮಾಡಿಡುತ್ತಿದ್ದಳು.

ಬೆಳಿಗ್ಗೆಯ ತಿರುಗಾಟವನ್ನು ಬೀಣಾ ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದಳು. ಉದ್ದ ಸೆರಗು ಬಿಟ್ಟು, ತಲೆತುಂಬ ಮುಸುಕು ಹಾಕಿಕೊಂಡು, ಸಿಂಧೂರಭೂಷಿತೆಯಾಗಿ ನವಜ್ಯೋತ್ಸ್ನೆಯಂತೆ ಜತೆಯಲ್ಲಿ ಬರುತ್ತಿದ್ದ ಹೆಂಡತಿಯನ್ನು ಸುನೀಲಬಾಬು ಕದ್ದು ಕದ್ದು ಕಣ್ತುಂಬ ನೋಡುತ್ತಿದ್ದ.

ಬೀಣಾ ನಿಜವಾಗಿಯೂ ಸುಂದರಿ. ಸುನೀಲಬಾಬುವಿಗಿಂತ ಆಕೆ ೪–೫ ಅಂಗುಲ ಎತ್ತರವಿದ್ದಳು. ಸುನೀಲಬಾಬು ಸ್ವಲ್ಪ ಗುಂಡು ಗುಂಡು–ಅವನ ಮುಖ, ಮೈ, ತೋಳು ತೊಡೆ ಎಲ್ಲಾ ಗುಂಡಾಕಾರ. ಆದರೆ ಬೀಣಾ ತೆಳ್ಳಗೆ ಮಲ್ಲಿಗೆ ಬಳ್ಳಿಯ ಹಾಗಿದ್ದಳು. ಅವಳ ತುಂಬಿದ ಎದೆ, ನಿತಂಬ ಅವಳ ತೆಳು ಆಕೃತಿಗೆ ಹೆಚ್ಚಿನ ಕಳೆನೀಡಿದ್ದವು. ಮುಖವೂ ನೀಳವೇ—ಆದರೆ ಅದರ ಮೇಲಿದ್ದ ವಿಶಾಲ, ತುಂಬಿದ ಕಣ್ಣುಗಳು ಒಂದು ತೆರನ ದೈವೀಶಕ್ತಿಯನ್ನು ಸೂಚಿಸುತ್ತಿದ್ದವು. ಸುನೀಲಬಾಬು ಕೂಡ ಹೆಂಡತಿಯನ್ನು ದಿಟ್ಟಿಸಿ ನೋಡಲಾರ. ಅವಳ ಸೌಂದರ್ಯವೋ, ಗುಣವೋ ಅವನು ಕಣ್ತಗ್ಗಿಸುವಂತೆ ಮಾಡುತ್ತಿದ್ದವು.

ಬೀಣಾ ಲಗ್ನವಾಗಿ ಗಂಡನ ಮನೆಗೆ ಬಂದು ಹನ್ನೆರಡು ವರ್ಷಕ್ಕಿಂತಲೂ ಹೆಚ್ಚಾಗಿತ್ತು. ಅತ್ತೆಯಿಂದ ಬೀಗದ ಕೈ ಗೊಂಚಲನ್ನು ಕಿತ್ತುಕೊಂಡು ತನ್ನ ಸೆರಗಿನ ತುದಿಗೆ ಬಿಗಿದುಕೊಳ್ಳುವುದಕ್ಕೆ ಅವಳು ಯತ್ನಿಸಿರಲಿಲ್ಲ. ಅತ್ತೆ ಪದೇ ಪದೇ ಹೇಳುತ್ತಿದ್ದರು

"ಬೀಣಾ–ನನಗೂ ವಯಸ್ಸಾಯಿತು. ಕಣ್ಣು ಚೆನ್ನಾಗಿ ಕಾಣುವುದಿಲ್ಲ. ನಿನ್ನ ಮನೆ ಬೀಗದ ಕೈ ಗೊಂಚಲು ನೀನು ತೆಗೆದುಕೋ."

"ನಿಮ್ಮ ಹತ್ತಿರವಿದ್ದರೇನು–ನನ್ನ ಹತ್ತಿರವಿದ್ದರೇನು ?"

"ಹಾಗಲ್ಲಮ್ಮ– ನೋಡಿದವರು 'ಸೊಸೆ ಕೈಗೆ ಬೀಗದಕ್ಕೆ ಕೊಡುವುದಕ್ಕೆ ಇನ್ನೂ ಈ ಮುದುಕಿ ಹಿಂದೆ ಮುಂದೆ ನೋಡುತ್ತಿದೆ' ಎಂದು ಆಡಿಕೊಳ್ಳುತ್ತಾರೆ.

"ನಾವು ಅತ್ತೆ–ಸೊಸೆಯ ಹಾಗಿಲ್ಲವಲ್ಲಾ."

"ಹೌದು. ಅದು ಅವರಿಗೇನು ಗೊತ್ತು."

"ನೀವಿರುವತನಕ ಗೊಂಚಲು ನಿಮ್ಮಲ್ಲಿಯೇ ಇರಬೇಕು ಅತ್ತೆ. ನನ್ನ ಈಗಲೇ ಜವಾಬ್ದಾರೀಗೆ ಕಟ್ಟಿಹಾಕಬೇಕೆಂದು ಹವಣಿಸುತ್ತಿರುವಿರಾ ?"

"ಎಲ್ಲಾ ಜವಾಬ್ದಾರಿ ಹೊತ್ತಿರುವವಳು ನೀನು. ಹಗಲಿರುಳೂ ದುಡಿಯುವವಳು ನೀನು–ಸುಮ್ಮನೆ ಕೂತುಕೊಂಡು ಯಜಮಾನಿಕೆ ಮಾಡುವವಳು ನಾನು."

"ನಿಮ್ಮ ವಯಸ್ಸು ಬಂದಾಗ ನಾನೂ ನಿಮ್ಮಂತೆಯೇ ಮಾಡುತ್ತೇನೆ"

ಎಂದು ಹೇಳಿದಳೇ ವಿನಾ 'ಬೀಗದ ಕೈ ಗೊಂಚಲು ಕೊಡಿ' ಎಂದು ಕೇಳಲಿಲ್ಲ.

ತನ್ನ ತಾಯಿ–ಹೆಂಡತಿ ಇಷ್ಟು ಅನ್ಯೋನ್ಯವಾಗಿರುವುದನ್ನು ಕಂಡು ಸುನೀಲಬಾಬು ಹಿಗ್ಗಿದ್ದ. ದಾಯಾದಿಗಳ ಮನೆ ವ್ಯವಹಾರ ಕಂಡು, ಕೇಳಿದಾಗ ಅವನ ಮೈಮೇಲೆ ಮುಳ್ಳು ಏಳುತ್ತಿತ್ತು. 'ಮನೆಯಲ್ಲಿನ ಹೆಣ್ಣು ಮಕ್ಕಳು ಒಬ್ಬರಿಗೊಬ್ಬರು ಹೊಂದಿಕೊಂಡಿರದಿದ್ದರೆ– ಆ ಮನೆ ನರಕವಾಗುತ್ತದೆ' ಎಂದು ಪದೇ ಪದೇ ಗೆಳೆಯರಿಗೆ ಹೇಳುತ್ತಿದ್ದ.

ಅವನ ಮನಸ್ಸನ್ನು ಹೆಂಡತಿಯ ಕಾಹಿಲೆ ಕೊರೆಯುತ್ತಿತ್ತು. ಕವಿರಾಜರು ಕ್ಷಯದ ಬೆದರಿಕೆ ಹಾಕಿದ ಮೇಲೆ ಸುನೀಲ ಬಾಬುವಿಗೇ ಕ್ಷಯ ಹತ್ತಿದಂತಾಯಿತು.

ಒಮ್ಮೊಮ್ಮೆ ಒಬ್ಬನೇ ಕುಳಿತಾಗ ಯೋಚಿಸುತ್ತಿದ್ದ

"ನಾಳೆ ಇದ್ದಕ್ಕಿದ್ದಂತೆ ಬೀಣಾ ತೀರಿಕೊಂಡರೆ ?"

ಆ ಭಾವನೆಯೇ ಅವನನ್ನು ನಡುಗಿಸುತ್ತಿತ್ತು. ಅವನ ಕಣ್ಣಮಣಿ ಶುಭಾ. ಅವಳಿಗೆ ಯಾರು ದಿಕ್ಕು? ಇಳಿವಯಸ್ಸಿನ ತಾಯಿಯ ಗತಿಯೇನು? ತನ್ನ ಗತಿಯೇನು? ಎಲ್ಲ ಜೀವಗಳನ್ನು ಬೀಣಾ ತನ್ನ ಹೃದಯದಲ್ಲಿ ಔತಿಟ್ಟುಕೊಂಡಿದ್ದಳು. ಮನೆಗಷ್ಟೇ ಮಹಾಲಕ್ಷ್ಮಿಯಲ್ಲ—ನೆರೆಹೊರೆಯವರಿಗೆ—ಊರಿಗೆ ಮಹಾಲಕ್ಷ್ಮಿಯಾಗಿದ್ದಳು.

ಯಾರ ಮನೆಯಲ್ಲಿ ಏನು ಕೊರತೆ ಬಂದರೂ ಬೀಣಾ ಬಳಿಗೆ ಓಡಿ ಬರುತ್ತಿದ್ದರು. ಕೈಸಾಲ ಕೇಳುವವರಿಗೆ ಲೆಕ್ಕವೇ ಇಲ್ಲ. ಆದರೆ ಯಾವ ಕೈಸಾಲವನ್ನೂ ಬೀಣಾ ಹಿಂದಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ. ಒಂದೊಂದು ಸಲ ಅತ್ತೆ ಸೊಸೆಯ ಮೇಲೆ ಸಿಟ್ಟುಮಾಡುತ್ತಿದ್ದಳು.

"ಇನ್ನು ಯಾರಿಗೂ ಒಂದು ಕುಡಿಕೆ ಎಣ್ಣೆ ಕೂಡ ಕೊಡಲ್ಲ ಅತ್ತೇ—ಸಾಲ ತೆಗೆದುಕೊಂಡು ಹೋದವರನ್ನು 'ಹಿಂದಕ್ಕೆ ಕಳುಹಿಸಿ' ಎಂದು ಖಂಡಿತವಾಗಿ ಕೇಳಿಬಿಡುತ್ತೇನೆ."

ಎಂದು ಹೇಳುತ್ತಿದ್ದಳು. ಆದರೆ ಅದು ಬರಿ ಮಾತು. ಪುನಃ ಪುನಃ ಅದೇ ಕಥೆಯೇ. ಗಾಯಿತ್ರಿ ಸೊಸೆಯ ಧಾರಾಳ ಕಂಡು ನಕ್ಕು

"ಬೀಣಾ – ಋಣ ನಿರ್ಧಾರ ಮಾಡಬೇಡ. ಅದನ್ನು ಆಚರಣೆಗೆ ತರುವುದು ನಿನ್ನಿಂದ ಸಾಧ್ಯವಿಲ್ಲ. ನಿನ್ನ ಕೈ ಬರೀತೂತು–ಪಾಪ, ನೀನೇನು ಮಾಡುತ್ತಿ."

ಎಂದು ಹೇಳುತ್ತಿದ್ದಳು.

ಮನೆಯಲ್ಲಿದ್ದುದನ್ನು ಕಂಡಕಂಡವರಿಗೆ ಕೊಡುವುದಕ್ಕೆ, ಬೇಡಿದವರಿಗೆ ಬೇಡಿದುದನ್ನು ನೀಡುವುದಕ್ಕೆ ಸುನೀಲಬಾಬು ಅಂಥ ಶ್ರೀಮಂತನೇನಲ್ಲ. ಅವನು ಶ್ರೀಮಂತನಾಗಿದ್ದರೆ ಔದಾರ್ಯ ಬೀಣಾಪಾಣಿಯಲ್ಲಿ ಬೆಳೆಯುತ್ತಿತ್ತೋ ಇಲ್ಲವೋ? ರಾಮ್‌ಗಂಜ್ ಸುನೀಲಬಾಬುವಿನ ಹುಟ್ಟೂರು. ಒಂದು ಮನೆ, ಸ್ವಲ್ಪ ಹೊಲಗದ್ದೆ ಆಸ್ತಿಯಿತ್ತು. ಸುನೀಲಬಾಬು ಮೆಟ್ರಿಕ್ಯುಲೇಷನ್ ತನಕ ಓದಿದ. ಆದರೆ ಸಂಸಾರ ತಾಪತ್ರಯದಲ್ಲಿ ಮುಂದೆ ಓದು ಸಾಗಲಿಲ್ಲ. ಆ ವೇಳೆಗಾಗಲೇ ಅವನ ಲಗ್ನವೂ ಆಗಿತ್ತು. ಕೈಯಲ್ಲಿದ್ದ ಹಣವನ್ನು ಮುಂದೆ ವಿದ್ಯಾಭ್ಯಾಸಕ್ಕೆ ಪೋಲುಮಾಡುವುದರ ಬದಲು ಯಾವದಾದರೂ ಉದ್ಯೋಗವನ್ನು ಕೈಗೊಳ್ಳುವುದೆಂದು ಭಾವಿಸಿ

ಸಣ್ಣದಾಗಿ ಒಂದು ಬೀಡಿ ಕಾರ್ಖಾನೆ ತೆಗೆದ. ಮೊದಲು ಮೂರು ಜನ ಕೂಲಿಗಳು ಬೀಡಿ ಕಟ್ಟಿಕೊಡುತ್ತಿದ್ದರು. ಅದಕ್ಕೆ ಚಂದದ ಕಾಗದ ಹಚ್ಚಿ ಸುನೀಲಬಾಬು ಮಾರಾಟಕ್ಕಿಡುತ್ತಿದ್ದ. ಅವನ 'ಬಂಗಾಳ ಬೀಡಿಗಳು' ಕಾಲಕ್ರಮೇಣ ಜನ ಪ್ರೀತಿಯನ್ನು ಸಂಪಾದಿಸಿದವು. ಬಾಬು ಕಾರ್ಖಾನೆ ಬಡಾಯಿಸುತ್ತ ಬಂದ.

ಕಾರ್ಖಾನೆ ಒಂದು ವರ್ಷ ನಡೆಯಿತು. 'ಬಂಗಾಳಾ ಬೀಡಿಗಳು' ಮಿಕ್ಕ ಬೀಡಿಗಳಿಗಿಂತ ಮೇಲೆಂದು ಹೆಸರು ಪಡೆದವು. ಕಾರ್ಖಾನೆಯನ್ನು ವಿಸ್ತರಿಸಿ, ಹೆಚ್ಚು ಜನರನ್ನು ಕೆಲಸಕ್ಕಿಟ್ಟುಕೊಂಡು, ಉತ್ಪತ್ತಿಯನ್ನು ಹೆಚ್ಚಿಸಬೇಕೆಂದು ಸುನೀಲನ ಆಶೆ. ಆದರೆ ಅವನಲ್ಲಿ ಹಣವಿರಲಿಲ್ಲ. ಒಂದು ದಿನ ಮೇಸ್ತ್ರಿ ದಾವೂದ ಸೂಚಿಸಿದ.

"ಬಾಬು, ಜನ ಬೇಡಿದಷ್ಟು ನಾವು ಬೀಡಿ ತಯಾರಿಸಬೇಕು. ಕಳೆದಷ್ಟು ದಿನವೂ ಹೀಗೇ ಇದ್ದರೆ ಹೇಗೆ?"

"ನಾನೇನು ಮಾಡಲಿ ದಾವೂದ್. ಅದಕ್ಕೆ ಹೆಚ್ಚು ಹಣ ಬೇಕು. ನನ್ನ ವರಮಾನ ಖರ್ಚಿಗೆ ಸಾಕಾಗುತ್ತದೆ."

"ಹಣ ಎಷ್ಟು ಬೇಕಾಗಬಹುದು ಬಾಬೂ?"

"ಎರಡು ಸಾವಿರವಾದರೂ ಬೇಕಾಗಬಹುದು."

"ನಾನೊಂದು ಮಾತು ಹೇಳಲೇ?"

"ಹೇಳು."

"ನಮ್ಮ ಹಮೀದಖಾನನ ಹತ್ತಿರ ದುಡ್ಡಿದೆ. ಅವನೂ ಯಾವ ದಾದರೂ ವ್ಯಾಪಾರಕ್ಕೆ ಅದನ್ನು ಹಾಕಬೇಕೆಂದು ಯೋಚಿಸುತ್ತಿದ್ದಾನೆ. ನೀವು ಒಪ್ಪಿದರೆ ಅವನನ್ನು ಕರೆದುಕೊಂಡು ಬರುತ್ತೇನೆ."

"ಹಮೀದ್‌ಖಾನ್ ಯಾರು?"

"ನನ್ನ ಅಕ್ಕನ ಮಗ. ತುಂಬ ಒಳ್ಳೆಯ ಹುಡುಗ."

"ಕರೆದುಕೊಂಡು ಬಾ – ಮಾತನಾಡುವ"

ಎಂದ. ಹಮೀದ್‌ಖಾನನ ಭೇಟಿಯೂ ಆಯಿತು - ವ್ಯಾಪಾರವೂ ಕುದುರಿತು. ಹಮೀದ್ ಮತ್ತು ಸುನೀಲಬಾಬು ಸಮಸಮ ಲಾಭ ತೆಗೆದು ಕೊಂಡು ಪಾಲುಗಾರರಾಗತಕ್ಕದೆಂದು ನಿರ್ಣಯವಾಯಿತು.

ಹಮೀದ್ ಬಂದ ಮೇಲೆ ಕೆಲಸಗಾರರ ಸಂಖ್ಯೆ ಇಪ್ಪತ್ತಕ್ಕೇರಿತು. ಹಮೀದ್ ಸ್ವಯಂ ಕೆಲಸಗಾರನಾಗಿದ್ದ. ದಿನಕ್ಕೆ ಅವನೇ ೧೦೦೦ ಬೀಡಿಗಳನ್ನು ಕಟ್ಟುತ್ತಿದ್ದ. ಅವನ ಕೆಲಸದ ಉತ್ಸಾಹ, ಪ್ರಾವೀಣ್ಯತೆಗಳನ್ನು ಕಂಡು ಇತರ ಕೆಲಸಗಾರರು ಆಲಸಿಗರಾಗಿರಲು ಸಾಧ್ಯವಿಲ್ಲವಾಯಿತು.

ಹಮೀದ ಅನಿಲಬಾಬು ಮನೆಯವರಲ್ಲಿ ಒಬ್ಬನಾದ. ಅವನನ್ನು ಕಂಡರೆ ಬಾಬುವಿಗಂತೂ ಹೇಳಲಾರದಷ್ಟು ವಿಶ್ವಾಸ. ಮನೆಯಲ್ಲಿ ಏನೊಂದು ಹೆಚ್ಚುಗಟ್ಟಳೆಯಾಗಲಿ, ಒಂದು ಸಿಹಿಮಾಡಲಿ ಹಮೀದ್ ಭಾಯ್‌ಗೆ ಕೊಡದಿದ್ದರೆ ಅವನಿಗೆ ತೃಪ್ತಿಯಿಲ್ಲ.

ರಸಗುಲ್ಲ ಮಾಡುವುದರಲ್ಲಿ ಬೀಣಾ ತನ್ನದೇ ಆದ ಒಂದು ಪಾಕವನ್ನು ಕಂಡು ಹಿಡಿದಿದ್ದಳು. ಎಷ್ಟೋ ಸಲ ಬಾಬು ನಗೆಯಾಡುತ್ತಿದ್ದ.

"ಬೀಣಾ–ಬೀಡಿ ಫ್ಯಾಕ್ಟರಿ ತೆಗೆಯುವುದರ ಬದಲು ನಾನು ರಸಗುಲ್ಲ ಫ್ಯಾಕ್ಟರಿ ತೆಗೆದಿದ್ದರೆ ಈ ವೇಳೆಗೆ ಲಕ್ಷಾಧಿಕಾರಿಯಾಗುತ್ತಿದ್ದೆ. ನಿನ್ನ ರಸಗುಲ್ಲಾನ ಇಂಗ್ಲೆಂಡ್ ಅಮೆರಿಕಾಗಳಿಗೆ ಕಳುಹಿಸುತ್ತಿದ್ದೆ."

ರಸಗುಲ್ಲ ಮಾಡಿದ ದಿನ ಒಂದು ಡಬ್ಬ ತುಂಬ ರಸಗುಲ್ಲ ಹಮೀದ್ ಭಾಯಿಯ ಮನೆಗೆ ಹೋಗುತ್ತಿತ್ತು.

ಫ್ಯಾಕ್ಟರಿ ಮುಗಿಸಿಕೊಂಡು ಬಾಬು, ಮನೆಗೆ ಬರುತ್ತಾ ಜತೆಯಲ್ಲಿ ಹಮೀದನನ್ನೂ ಕರೆದುಕೊಂಡು ಬರುತ್ತಿದ್ದ. ಹೊರಗಿದ್ದ ನಾರಿನ ಮಂಚದ ಮೇಲೆ ಇಬ್ಬರೂ ಕೂಡುತ್ತಿದ್ದರು. ಬಾಬು ಗುಡುಗುಡಿ ಹೊತ್ತಿಸಿ ಹಮೀದನ ಕೈಯಲ್ಲಿಡುತ್ತಿದ್ದ. ನಳಿಗೆ ಬದಲಾಯಿಸುವ ಗೋಜಿಗೂ ಹೋಗದೆ ಇಬ್ಬರೂ ಸೇದುತ್ತಿದ್ದರು. ಬೀಣಾ ಬಾಗಿಲು ಮರೆಯಲ್ಲಿ ಕುಳಿತು ರಾತ್ರಿ ಅಡಿಗೆಗೆ ಅಕ್ಕಿ ಆರಿಸುತ್ತ ಅವರ ಮಾತು ಕೇಳುತ್ತಿರುತ್ತಿದ್ದಳು ಶುಭಾ ಆಡುತ್ತ ವಿನೋದಕ್ಕೆ ಹಮೀದನ ಟೊಪ್ಪಿಗೆ ಹಾಕಿಕೊಂಡು ಅವನ ಬೋಳು ತಲೆ ಸವರುತ್ತಿದ್ದಳು. ಶುಭಾ ಏನು ಮಾಡಿದರೂ ಹಮೀದನಿಗೆ ಹಿಗ್ಗು.

ಒಂದು ದಿನ ಹಮೀದ ವಿನೋದಕ್ಕೆ ಕೇಳಿದ

"ಶುಭಾ–ಹೇಳು. ನಾನು ಚೆನ್ನೋ ನಿನ್ನ ದಾದಾ ಚೆನ್ನೋ."

"ದಾದಾನೇ ಚೆನ್ನ-ನೀನು ಮಂಗ ಇದ್ದ ಹಾಗಿದ್ದೀ."

" ಹೋಗು ಹಾಗಾದರೆ ನಾನು ನಾಳೆ ಕಲ್ಕತ್ತೆಗೆ ಹೋದಾಗ ನಿನಗೆ ಸಿಲಲಾಯಿಡ್ ಬೊಂಬೆ ತಂದೇ ಕೊಡುವುದಿಲ್ಲ.

" ಇಲ್ಲ ಕಾಕಾ "

ಎಂದು ಅವನ ಕುತ್ತಿಗೆಯನ್ನಪ್ಪಿ, ಮುದ್ದಿನ ಮಳೆಗರೆದು

" ತಂದು ಕೊಡುವೆಯಾ ? "

ಎಂದು ಕೇಳುತ್ತಿದ್ದಳು. ಹಮೀದಾ ಅವಳನ್ನು ಮುದ್ದಾಡುತ್ತಾ

" ಭೇಷಕ್–ಒಂದಲ್ಲ ಎರಡು. "

ಶುಭಳನ್ನು ಕಾಣದಿದ್ದರೆ ಜೀವ ತತ್ತರಿಸುತ್ತಿತ್ತು ಹಮೀದನಿಗೆ. ಒಂದೊಂದು ದಿನ ಅವಳನ್ನು ಅಂಗಡಿಗೆ ಕರೆದೊಯ್ದು ಪಕ್ಕದಲ್ಲೇ ಕೂಡಿಸಿ ಕೊಂಡಿರುತ್ತಿದ್ದ. ತಾನೇ ಹೊತ್ತುಕೊಂಡು, ದಾರಿಯಲ್ಲಿ ಬತ್ತಾಸು, ಖರ್ಜೂರ, ದ್ರಾಕ್ಷಿಯನ್ನು ಅವಳ ಲಂಗದ ಉಡಿಗೆ ತುಂಬಿ ಮನೆಯಲ್ಲಿ ಬಿಟ್ಟು ಹೋಗುತ್ತಿದ್ದ.

" ಏನೇ ಇದು–ಕಾಕನನ್ನು ಇಷ್ಟು ಸುಲಿದಿದ್ದಿ. "

ಎಂದು ದಾದಾ ಕೇಳಿದರೆ

" ನಾನೇನು ಮಾಡಲಿ. ಕಾಕಾ ಬೇಡವೆಂದರೂ ಕೊಡಿಸುತ್ತಾನೆ "

ಎಂದು ಸಮಾಧಾನ ಹೇಳುತ್ತಿದ್ದಳು.

ಒಂದು ದಿನ ಮಾತನಾಡುತ್ತ ಕುಳಿತಿದ್ದಂತೆ ಹಮೀದ ಹೇಳಿದ

" ಬಾಬು, ಮಕ್ಕಳಿಲ್ಲದ ಮನೆ ಮನೆಯೇ ಅಲ್ಲ. "

" ನಿಜ ಭಾಯ್. ಶುಭಾ ನನ್ನ ಹೃದಯದ ಹಕ್ಕಿ. "

" ನನಗೆ ದೊಡ್ಡ ಮಗ ಇದ್ದಿದ್ದರೆ........

" ಏನು ಇದ್ದಿದ್ದರೆ....? "

" ಶುಭಾಳನ್ನು ಅವನಿಗೆ ತಂದುಕೊಂಡು ಬಿಡುತ್ತಿದ್ದೆ. "

" ತುಂಬ ಸಂತೋಷ. "

" ಬಾಯಿ ಮಾತಿನಲ್ಲಿ ಅನ್ನುತ್ತೀರಿ. ಬಾಬೂ, ನಿಜವಾಗಿಯೂ ನನ್ನ ಮಗನಿಗೆ ನೀವು ಶುಭಳನ್ನು ಲಗ್ನಮಾಡಿಕೊಡುತ್ತಿದ್ದಿರಾ ? ಭಾಬಿ ಇದ ಕ್ಕೊಪ್ಪುತ್ತಿದ್ದರೇ. "

ಒಳಗಿನಿಂದ ಬೀಣಾ ಉತ್ತರವಿತ್ತಳು.

"ಹಮೀದ್‌ಭಾಯ್—ವಿಶ್ವಾಸ ಏನು ತಾನೆ ಮಾಡಿಸಲಾರದು. ಮತ ಮನುಷ್ಯ ಮಾಡಿಕೊಂಡ ಕಟ್ಟುಪಾಡು. ಅದನ್ನು ತಿದ್ದುವ ಹಕ್ಕು ಮನುಷ್ಯನಿಗಿಲ್ಲವೇ?"

"ಸತ್ಯ ಭಾಬಿ. ಜನಕ್ಕೆ ಅಂಥ ತಿಳುವಳಿಕೆ ಬಂದರೆ ಲೋಕಕ್ಕೆ ತುಂಬ ಕ್ಷೇಮವಾಗುತ್ತದೆ."

ಒಂದೊಂದು ದಿನ ಅನಿಲಬಾಬು, ಹೆಂಡತಿ ಮಗುವಿನೊಂದಿಗೆ ಹಮೀದನ ಮನೆಗೆ ಹೋಗಿ ಬರುತ್ತಿದ್ದ.

ಹಮೀದನ ಹೆಂಡತಿ ನೂರುನ್ನೀಸಳಿಗೂ ಬೀಣಾಪಾಣಿಗೂ ತುಂಬ ಸ್ನೇಹ ಬೆಳೆಯಿತು. ನೂರ್ ಆಗಾಗ್ಗೆ ತಾನು ಗಂಡನಿಂದ ಶೇಖರಿಸಿದ್ದ ಹಣವನ್ನು ಬೀಣಾ ಕೈಗೆ ಹಾಕುತ್ತಿದ್ದಳು. ಬೀಣಾ ಅವಳಿಗೆ ಏನಾದರೂ ಒಡವೆ ಮಾಡಿಸಿಕೊಡುತ್ತಿದ್ದಳು.

ಬೈತಲೆಗೆ, ಕಾಲಿಗೆ ಸಿಂಧೂರ ಹಚ್ಚಿಕೊಳ್ಳುವುದನ್ನು ಬೀಣಾ ನೂರಳಿಗೆ ಕಲಿಸಿದ್ದಳು.

ಒಮ್ಮೆ ಎಲ್ಲರೂ ಹಮೀದನ ಮನೆಯಲ್ಲಿ ಸೇರಿದ್ದಾಗ ಹಮೀದ ವಿನೋದಕ್ಕೆ

"ಬಾಬೂ, ಮೆಲ್ಲಗೆ ಭಾಬಿ ನಮ್ಮ ಬೀಗಂ ಸಾಹೇಬರನ್ನು ಹಿಂದೂ ಮಾಡುತ್ತಿದ್ದಾರೆ?"

"ಹೇಗೆ"

"ಈಗ ನಮ್ಮ ಬೀಗಂ ಸಾಹೇಬರನ್ನು ನಾನೇ ಗುರುತಿಸುವುದು ಕಷ್ಟ ವಾಗುತ್ತದೆ. ಅವರ ಸಿಂಧೂರ, ಕೈಬಳೆ, ಕೊರಳಸರ ನೋಡಿದರೆ ಹಮೀದ ಯಾರೋ ಹಿಂದೂ ಹೆಣ್ಣುಮಗಳನ್ನು ಲಗ್ನವಾಗಿದ್ದಾನೆಂದು ಭಾವಿಸ ಬಹುದಾಗಿದೆ."

"ಭಯ್ಯಾ ತನ್ನ ಮನೆಗೆ ಶುಭನನ್ನು ತಂದುಕೊಳ್ಳಬೇಕೆಂದು ಹಾತೊರೆಯುತ್ತಿದ್ದಾರೆ. ನಮ್ಮ ಶುಭಾ ಬರುವ ಮನೆ ಹಿಂದೂಮನೆ ಯಾಗಲೆಂದು ತಂಗಿ ನೂರಳನ್ನು ಹಿಂದೂ ಮಾಡುತ್ತಿದ್ದೇನೆ."

ಎಂದು ಬೀಣಾ ಹೇಳಿದಳು. ಎಲ್ಲರೂ ಅವಳ ಮಾತು ಕೇಳಿ ಕಿಲಕಿಲನೆ ನಕ್ಕರು.

ನೂರ್ ಅನಕ್ಷರಜ್ಞೆ. ಆದರೆ ಹೊಸ ವಿಷಯ ತಿಳಿಯುವುದಕ್ಕೆ, ಹೊಸ ಸುದ್ದಿ ಕೇಳುವುದಕ್ಕೆ ಅವಳಿಗೆ ತುಂಬ ವಿಶ್ವಾಸ. ಬಾಬೂ, ಹಮೀದ ಅಂಗಡಿಗೆ ಹೋಗಿದ್ದಾಗ ತಾನೇ ಬೀಣಾ ಮನೆಗೆ ಬರುತ್ತಿದ್ದಳು. ಬೀಣಾ 'ಬಸುಮತಿ' 'ಪ್ರಬಾಸಿ' ಓದಿ ಅವಳಿಗೆ ಅವುಗಳ ವಿಷಯ ತಿಳಿಸುತ್ತಿದ್ದಳು. ರಾಮಾಯಣ, ಭಾರತದ ಕಥೆಗಳನ್ನು ಕೇಳುವುದಕ್ಕೆ ನೂರಳಿಗೆ ತುಂಬ ಉತ್ಸಾಹ.

ಎರಡು ಕುಟುಂಬಗಳ ಜೀವನವನ್ನು ಬೀಣಾ, ನೂರ್ ಹೆಣೆದು ಬಿಟ್ಟಿದ್ದರು.

ಹಮೀದ ಫ್ಯಾಕ್ಟರಿ ಉಸ್ತುವಾರಿಗೆ ನಿಂತದ್ದು ಅನಿಲಬಾಬುವಿಗೆ ಕೋಟಿ ಬುಜ ಬಂದಂತಾಗಿತ್ತು. ಪ್ರಕಟನೆ ನೋಡಿಕೊಳ್ಳುವುದು, ಬೀಡಿ ಲೇಬಲ್ ಅಚ್ಚು ಹಾಕಿಸುವುದು, ಮಾರಾಟದ ಲೆಕ್ಕವಿಡುವುದು, ತಂಬಾಕು, ಎಲೆ, ಧಾರ, ಇನ್ನಿತರ ಸಾಮಾನುಗಳನ್ನು ಕೊಳ್ಳುವುದು ಎಲ್ಲವನ್ನೂ ಬಾಬು ನಿರ್ವಹಿಸುತ್ತಿದ್ದ. ಪ್ರತಿದಿನದ ಲೆಕ್ಕ ಹಮೀದನಿಗ ತೋರಿಸುತ್ತಿದ್ದ. ಮುಂದಾದರೂ ತಮ್ಮಲ್ಲಿ ಯಾವ ಕಾರಣಕ್ಕಾಗಿಯೂ ಮನಸ್ತಾಪ ಬಾರದಂತೆ ಅನಿಲಬಾಬು ಎಚ್ಚರವಾಗಿದ್ದ.

ಮೂರು ವರ್ಷದಲ್ಲಿ ಬೀಡಿ ಕಾರ್ಖಾನೆ ಅಳತೆಮೀರಿ ಬೆಳೆಯಿತು. ಬಾಬು, ಹಮೀದ ಹಾಕಿದ ಮೂಲಧನದ ನಾಲ್ಕರಷ್ಟು ಉತ್ಪತ್ತಿಯಾಗಿತ್ತು. ಇಬ್ಬರೂ ಸ್ಥಿತಿವಂತರಾಗಿ ಹೊಸಭೂಮಿ, ತೋಟಗಳನ್ನು ಕೊಂಡಿದ್ದರು. ಹಮೀದ ತಾನೇ ಕುಳಿತು ಬೀಡಿ ಕಟ್ಟುವುದನ್ನು ಬಿಟ್ಟಿದ್ದ.

ಹಣ ತನ್ನ ಪ್ರಭಾವವನ್ನು ತೋರದೆ ಬಿಡಲಿಲ್ಲ. 'ಹಮೀದನಿಗೆ ಅಹಂಕಾರ ಬಂತು' ಎಂದು ಜನ ಆಡಿಕೊಳ್ಳಲಾರಂಭಿಸಿದರು. ಅವನ ವೇಷಭೂಷಣಗಳಲ್ಲಿ ಸೊಗಸು ತಲೆ ಹಾಕಿತು. ಪ್ರತಿ ತಿಂಗಳೂ ಏನಾದರೂ ನೆಪಮಾಡಿಕೊಂಡು ಕಲ್ಕತ್ತೆಗೆ ಹೋಗಿ ಬರುತ್ತಿದ್ದ.

ಒಂದು ದಿನ ಅವನ ಬಾಯಿಂದ ದುರ್ವಾಸನೆ ಬರುತ್ತಿದ್ದುದನ್ನು ಬಾಬು ಕಂಡುಕೊಂಡ. ಮಾರನೆಯ ದಿನ ಹಮೀದ ಮನೆಗೆ ಬಂದಾಗ ಮೆಲ್ಲಗೆ

"ಹಮೀದ್‌ಭಾಯ್-ಒಂದು ಪ್ರಶ್ನೆ ಕೇಳುತ್ತೇನೆ. ಸರಿಯಾಗಿ ಉತ್ತರ ಹೇಳುತ್ತೀಯಾ?"

"ಆಗಲಿ ಅದಕ್ಕೇನು?"

"ಈಚೆಗೆ ಕುಡಿಯುವುದನ್ನೇಕೆ ಕಲಿತೆ?"

"ಸ್ನೇಹಿತರ ಬಲವಂತಕ್ಕೆ ಸ್ವಲ್ಪ ತೆಗೆದುಕೊಳ್ಳುತ್ತೇನೆ. ಆದರೆ ನಾನು ಕುಡುಕನಲ್ಲ."

"ಇಂಥ ದುರಭ್ಯಾಸ ಮಾಡಿಸುವವರು ಸ್ನೇಹಿತರಲ್ಲ-ದುಷ್ಮನ್‌ಗಳು."

"ನಿಜ ಬಾಬೂ. ಆದರ ನಾಲ್ಕು ಜನದ ಜತೆ ಇದ್ದಾಗ ಅವರಂತೆ ವರ್ತಿಸದಿದ್ದರೆ ತುಂಬ ಅಸಹ್ಯವಾಗುತ್ತದೆ.

"ನಿನಗೆ ನೀತಿಪಾಠ ಹೇಳುವ ಅಧಿಕಾರ ನನಗಿಲ್ಲ ಹಮೀದ್. ನೀನು ತಿಳುವಳಿಕಸ್ಥ-ಆದರೆ ಒಂದು ಮಾತು ಹೇಳದಿದ್ದರೆ ತಪ್ಪಾಗುತ್ತದೆ. ಶಿಷ್ಟಾಚಾರಕ್ಕೂ ಕುಡಿಯಬೇಡ—ಇದು ಪತನದ ದಾರಿ—ನಾಳೆ ಒಂದರಿಂದ ಒಂದು ಪಾಪ ನಿನ್ನ ಆವರಿಸುತ್ತದೆ. ಕುರಾನಿನಲ್ಲಿ ಪೈಗಂಬರರು ಕುಡಿತವನ್ನು ನಿಷೇಧಿಸಿಲ್ಲವೇ?"

"ಕುರಾನನ್ನು ಅನುಸರಿಸುವುದು ನಮ್ಮಂಥ ಸಾಮಾನ್ಯರಿಗೆ ಸಾಧ್ಯವೇ?"

"ನಿಮ್ಮ-ನಮ್ಮಂಥವರಿಗಾಗಿಯೇ ಕುರಾನ್ ಇರುವುದು. ಲೋಕದ ಜನ ತಮ್ಮ ಬಾಳನ್ನು ತಿದ್ದಿಕೊಳ್ಳಲಿ-ಹತ್ತು ಜನಕ್ಕೆ ಪ್ರಯೋಜನವಾಗುವ ಬದುಕನ್ನು ನಡೆಸಲಿ ಎಂದು ಗುರು ಹೇಳಿದ್ದಾರೆ. ಹಜರತ್ತರು ಆಡಿದುದನ್ನು ಮಾಡಿ ತೋರಿಸಿದ್ದಾರೆ."

"ಇನ್ನು ನಾನು ಷರಾಬ್ ಮುಟ್ಟುವುದಿಲ್ಲ ದಾದಾ."

ಎಂದ. ಬಾಬು ಅವನನ್ನು ಪ್ರೀತಿಯಿಂದ ಅಪ್ಪಿಕೊಂಡ.

ಹಮೀದನ ನಿರ್ಧಾರ ಸಾರ್ಥಕವಾಗಲಿಲ್ಲ. ಅವನು ತನ್ನನ್ನು ತಪ್ಪಿಸಿ ಕುಡಿಯುವುದಕ್ಕೆ ಹೋಗುತ್ತಿದ್ದಾನೆಂದು ಬಾಬು ತಿಳಿಯಲು ಬಹಳ ದಿವಸ ಹಿಡಿಯಲಿಲ್ಲ.

ಕ್ರಮಕ್ರಮೇಣ ಹಮೀದ ಫ್ಯಾಕ್ಟರಿ ಕೆಲಸದ ಬಗ್ಗೆಯೂ ಉದಾಸೀನ

ನಾಗುತ್ತ ಬಂದ. 'ಮನೆಗೆ ಹೋಗೋಣವೇ' ಎಂದು ಬಾಬು ಕರೆದರೆ 'ಇಲ್ಲ–ನನಗೆ ಬೇರೆ ಕೆಲಸವಿದೆ' ಎಂದು ಹಮೀದ ಜಾರಿಕೊಳ್ಳುತ್ತಿದ್ದ.

"ಶುಭಾ ನಿನ್ನ ನೋಡಬೇಕೂಂತ ಬಯಸುತ್ತಾಳೆ ಭಾಯ್."

"ಆಗಲಿ–ನಾಳೆ ಬರುತ್ತೇನೆ."

ಎಂದು ಹೇಳುತ್ತಿದ್ದ. ಆ ನಾಳೆ ಬರುತ್ತಲೇ ಇರಲಿಲ್ಲ.

ಹಮೀದನ ನಡತೆ ಬದಲಾಯಿಸಿದಂತೆ, ಅವನ ಬಗ್ಗೆ ತರತರಹೆ ಸುದ್ದಿಗಳು ಬರುತ್ತಿದ್ದವು. ಒಂದು ದಿನ ಶಾಲೆಯ ಹೆಡ್‌ಮಾಸ್ಟರ್ ತಾರಾಪಾದ ಮುಖರ್ಜಿ ಅನಿಲಬಾಬುವನ್ನು ಹುಡುಕಿಕೊಂಡು ಬಂದರು.

"ಏನು ಅಪರೂಪಕ್ಕೆ ಬಂದಿರಲ್ಲಾ." ಎಂದು ಕೇಳಿದ.

"ಬಾಬೂ . . . ನಿನಗೆ ಅಪ್ರಿಯವೆನಿಸುವ ಒಂದು ವಿಷಯ ಹೇಳುವುದಕ್ಕೆ ಬಂದಿದ್ದೇನೆ. ನಾನು ಹೇಳುವುದನ್ನು ತಪ್ಪು ಅರ್ಥಮಾಡಿಕೊಂಡು ನನ್ನ ಮೇಲೇ ಕೋಪಮಾಡಿಕೊಳ್ಳಬೇಡ."

"ಹೇಳಿ ಮುಖ್ಯೋಪಾಧ್ಯಾಯ."

"ನಿಮ್ಮ ಹಮೀದ ಮುಸ್ಲಿಂ ಲೀಗ್ ಸೇರಿದ್ದಾನಂತೆ. ನಿನ್ನಲ್ಲಿ ಆ ವಿಷಯ ತಿಳಿಸಿದನೆ?"

"ಇಲ್ಲ–ತಿಳಿಸಬಹುದು."

"ತಿಳಿಸುವುದಿಲ್ಲ. ಬರೆದಿಟ್ಟುಕೋ. ನೀನು ಹಾವಿಗೆ ಹಾಲೆರೆಯುತ್ತಿದ್ದೀ. ನಾಳೆ ಅದು ಸಾಕಿದವರನ್ನು ಕಚ್ಚದೆ ಬಿಟ್ಟೀತೇ?"

"ಮುಸ್ಲಿಂ ಲೀಗ್ ಸೇರಿದರೆ ತಪ್ಪೇನು?"

"ಏನು ಬಾಬು ಹೀಗೆ ಕೇಳುತ್ತೀ. ಅವರೂ ಕಾಂಗ್ರೆಸ್ಸಿನವರೂ ಹೊಡೆದಾಡುತ್ತಿರುವುದನ್ನು ನೀನು ಕಾಣೆಯಾ?"

"ಕಾಂಗ್ರೆಸ್ಸಿನವರ ಮೇಲೆ ಅವರ ಕೋಪ. ಆದರೆ ನಾನು ಕಾಂಗ್ರೆಸ್ಸಿನವನಲ್ಲವಲ್ಲ."

"ಹಿಂದುಗಳೆಲ್ಲ ಕಾಂಗ್ರೆಸ್ಸಿನವರೆಂದೇ ಅವರ ತಿಳುವಳಿಕೆ."

"ಕಾಂಗ್ರೆಸ್ ಹಿಂದೂ ಸಂಸ್ಥೆಯಲ್ಲ. ಅದು ಮುಸ್ಲಿಮರು, ಸಿಕ್ಕರು, ಕ್ರೈಸ್ತರು, ಪಾರ್ಶಿಗಳು, ಹಿಂದುಗಳು ಎಲ್ಲರ ಸಂಸ್ಥೆ. ಇದುವರೆಗಿದ್ದ

ಕಾಂಗ್ರೆಸ್ ಅಧ್ಯಕ್ಷರು ಮೌಲಾನಾ ಅಬುಲ್ ಕಲಂ ಅಜಾದರೇ ಮುಸಲ್ಮಾನರಲ್ಲವೇ ?"

"ಲೀಗಿನ ದೃಷ್ಟಿಯಲ್ಲಿ ಲೀಗ್ ಸೇರಿರುವರಷ್ಟೇ ಮುಸಲ್ಮಾನರು. ಇತರರೆಲ್ಲಾ ಕಾಫಿರರು."

"ಆದರೆ ನಮ್ಮ ಹಮೀದ ಹಾಗೆ ಭಾವಿಸುವವನಲ್ಲ."

"ನಿನ್ನ ಹಮೀದರಂಥವರೇ ಇಂದು ಕಲ್ಕತ್ತೆಯನ್ನು ರಣಭೂಮಿ ಮಾಡಿದ್ದಾರೆ. ಎಚ್ಚರದಿಂದಿರದಿದ್ದರೆ ನಾಳೆ ನೀನೇ ಪಶ್ಚಾತ್ತಾಪ ಪಡುತ್ತೀ" ಎಂದು ಹೇಳಿ ಹೋಗಿದ್ದರು.

ಬಾಬುವಿಗೆ ಯೋಚನೆ ಹತ್ತಿತು. ಕಲ್ಕತ್ತೆಯ ಹತ್ಯಾಕಾಂಡದ ಸುದ್ದಿ ತಿಳಿದ ಮೇಲಂತೂ ಅವನು ಭೂಮಿಗಿಳಿದು ಹೋದ. ಬಿನಯ್ ಪತ್ರ ಬರೆದಿರಲಿಲ್ಲ. ಬೆಳಿಗ್ಗೆ ಹೆಂಡತಿಗೆ ತಾನು ಕಲ್ಕತ್ತೆಗೆ ಹೋಗಿಬರುವ ಸುದ್ದಿ ತಿಳಿಸಲು ನಿರ್ಧರಿಸಿದ.

ಆದರೆ ಬೀಣಾ ಅವನನ್ನು ಕಲ್ಕತ್ತೆಗೆ ಹೋಗಬಿಡಲಿಲ್ಲ. ಬಾಬು ಬದಲು ಅವರ ನಂಬಿಕೆಯಾಳು ಚೌಧರಿ ಹೋಗಿ ಬಿನಯ್‌ಬಾಬುವನ್ನು ಕರೆದುಕೊಂಡು ಬರಬೇಕೆಂದು ನಿಶ್ಚಯವಾಯಿತು.

ಬಾಬುವಿಗೆ ಇದ್ದಕ್ಕಿದ್ದಂತೆ ಮಲೇರಿಯಾ ಕಾಣಿಸಿಕೊಂಡು ವಿಪರೀತ ಚಳಿ ಬಂತು. ಬಂಗಾಳ ಮಲೇರಿಯಾ ರೋಗಕ್ಕೆ ಪ್ರಸಿದ್ಧಿ. ಅದರ ಪೀಡನೆಯಿಂದ ವರ್ಷ ವರ್ಷ ಸಾವಿರಾರು ಜನ ಸಾಯುತ್ತಿದ್ದರು. ಜನ ಪ್ಲೇಗು, ಕಾಲರಾಗಳಿಗಿಂತ ಹೆಚ್ಚಾಗಿ ಮಲೇರಿಯಾ ಜ್ವರಕ್ಕೆ ನಡುಗುತ್ತಿದ್ದರು. ಬಾಬು ಅಂಗಡಿಗೆ ಹೋಗಲಿಲ್ಲ. ಸಂಜೆ ಜ್ವರಬಿಟ್ಟಿತು. ಮನೆಯ ಕೈಸಾಲೆಯಲ್ಲಿ ಹೊರಸುಮಂಚ ಹಾಕಿಸಿಕೊಂಡ ತುಂಬ ಹೊದೆದುಕೊಂಡು ಮಲಗಿದ್ದ.

ಹಮೀದನನ್ನು ನಿರೀಕ್ಷಿಸುತ್ತಿದ್ದಂತೆ ಅವನೇ ಬಂದ.

"ಏನು ಬಾಬು—ಜ್ವರ ಬಂತಂತಲ್ಲಾ."

"ಹೌದು ಭಾಯ್—ವಿಪರೀತ ಚಳಿ—ಬಾಕಿಯೆಷ್ಟು ವಸೂಲಾಯಿತು."

"ಸತ್ತಾರ್‌ಸಾಬ್ ೬೦೦ ರೂಪಾಯಿ ಕಳಿಸಿದ್ದಾರೆ."

“ ಹಾಗಾದರೆ ನಾಳೆ ಬಟವಾಡೆ ಮಾಡಿಬಿಡಬಹುದು. ”

“ ಓಹೋ. ಬಾಬು.... ”

“ ಏನು ಹಮೀದ್ ? ”

“ ಒಂದು ಸುದ್ದಿ ತಿಳಿಸಲು ಬಂದೆ. ”

“ ಸುದ್ದಿ ಇರಲಿ ಮೊದಲು ಚಹಾ ತೆಗೆದುಕೋ ? ”

“ ಬೇಡಿ—ಇದೇ ಕುಡಿದು ಬಂದಿದ್ದೇನೆ. ”

ಹಮೀದನಿಗೆ ಗಳಿಗೆಗಳಿಗೆಗೂ ಚಹಾ, ಚುಟ್ಟ ಬೇಕು. ಅವನು ಚಹಾ ಬೇಡವೆಂದುದು ಬಾಬುವಿಗೆ ಆಶ್ಚರ್ಯವನ್ನುಂಟುಮಾಡಿತು.

“ ಏನು ಸುದ್ದಿ–ಹೇಳು ಭಾಯಿ. ”

“ ನಮ್ಮ ಪಾಲುಗಾರಿಕೆ ಮುರಿಯಬೇಕಾಗಿದೆ. ”

ಸುನೀಲಬಾಬು ಚಕಿತನಾಗಿ ಎದ್ದು ಹಾಸಿಗೆಯ ಮೇಲೆ ಕುಳಿತ

“ ಏಕೆ ಹಮೀದ್—ನನ್ನ ವ್ಯವಹಾರದಲ್ಲಿ ಏನಾದರೂ ಹೆಚ್ಚು ಕಡಿಮೆಯಾಯಿತೇ ? ”

“ ಛೆ ! ಛೆ ! ಅದಕ್ಕಲ್ಲ. ”

“ ಹಾಗಾದರೆ........ ”

“ ನಮ್ಮ ಜನ ಬಲವಂತ ಮಾಡುತ್ತಿದ್ದಾರೆ. ”

“ ಮುಸ್ಲಿಂ ಲೀಗಿನವರೇ ? ”

“ ಯಾರೊ ? ಆ ವಿಷಯಬೇಡ. ”

“ ಇದನ್ನು ಚೆನ್ನಾಗಿ ಯೋಚನೆ ಮಾಡಿದ್ದೀಯಾ ಹಮೀದ್. ”

“ ಯೋಚನೆ ಮಾಡಿಯೇ ನಿನ್ನ ಹತ್ತಿರ ಮಾತೆತ್ತಿರುವುದು. ”

“ ತಂಗಿ ನೂರುನ್ನೀಸಳ ಕಿವಿಯ ಮೇಲೆ ಒಂದು ಮಾತು ಹಾಕಿದೆಯಾ ? ”

“ ನನ್ನ ವ್ಯವಹಾರ ಹೆಂಗಸರ ಜತೆ ನಾನು ಚರ್ಚೆಮಾಡುವುದಿಲ್ಲ. ”

“ ಸರಿ—ನಿನ್ನ ಸಲಹೆಯೇನು ? ”

“ನನ್ನ ಪಾಲಿನ ಹಣ ಕೊಟ್ಟುಬಿಡಿ–ಮುಂದೆ ಕಾರ್ಖಾನೆ ನೀವೇ ನಡಸಿಕೊಳ್ಳಿ. ಹಾಗಿಲ್ಲದಿದ್ದರೆ ನಾನು ಹಣ ಕೊಡುತ್ತೇನೆ, ಕಾರ್ಖಾನೆ ನನಗೆ ಬರೆದುಕೊಡಿ. ”

ಅನಿಲಬಾಬು ಕಣ್ಣಲ್ಲಿ ನೀರುರುಳಿತು.

ಹಮೀದ್, ಯಾರದೋ ಮಾತಿಗೆ ಇಷ್ಟು ದಿವಸದ ಸ್ನೇಹ–ಬಾಂಧವ್ಯ ಮುರಿದುಹಾಕುತ್ತೀಯಾ?"

"ಆ ವಿಷಯ ಇನ್ನು ಚರ್ಚಿಸಲು ಸಾಧ್ಯವೇ ಇಲ್ಲ."

"ನಿನಗೆ ಹೇಗೆ ಸೂಕ್ತವೋ ಹಾಗೆ ಮಾಡು"

"ನಾನು ಹಣ ತೆಗೆದುಕೊಂಡು ಹೋಗಲು ಸಿದ್ಧನಾಗಿದ್ದೇನೆ."

"ಎಷ್ಟು ಕೊಡಬೇಕು."

"೧೫,೦೦೦ ಹೆಚ್ಚಾದೀತೇ?"

"ಹಮೀದ್, ಫ್ಯಾಕ್ಟರಿ ಕಟ್ಟಿದವನು ನಾನು–ಬೆಳಸಿ ಅದನ್ನು ಇಂದಿನ ಸ್ಥಿತಿಗೆ ತಂದವನು ನೀನು. ನೀನು ಏನು ಬೇಕಾದರೂ ತೆಗೆದುಕೋ."

"ಸರಿ. ನಾಳೆ ಕಾಗದಪತ್ರ ಮಾಡಿಬಿಡೋಣ"

ಎಂದು ಹಮೀದ್ ಎದ್ದ. ಬಾಬು ಅವನ ಕೈಹಿಡಿದು ಕೊಂಡು

"ಭಯ್ಯಾ—ವ್ಯವಹಾರ ಮುಗಿಸಿದೆ, ಆದರೆ ಸ್ನೇಹ ಮುಗಿಸ ಬೇಡ"

ಎಂದು ಗದ್ಗದ ಸ್ವರದಲ್ಲಿ ಹೇಳಿದ. ಹಮೀದ್ ಮಾರುತ್ತರ ಕೊಡದೆ ಹೊರಟು ನಡೆದ. ಬೀಣಾ ಬಂದು ಗಂಡನ ಪಕ್ಕದಲ್ಲಿ ಕುಳಿತಳು. ಅವಳನ್ನು ಕಂಡ ಕೂಡಲೆ ಬಾಬು ಎಳೆಯ ಮಕ್ಕಳಂತೆ ಅತ್ತುಬಿಟ್ಟ.

"ಇಂದು ಹಮೀದ್ ಭಾಯ್‌ಗೆ ಶುಭ ಕೂಡ ಬೇಡವಾದಳು–ಅವಳ ಸುದ್ದಿ ಕೂಡ ಅವನು ತೆಗೆಯಲಿಲ್ಲ."

"ನೀವೇತಕ್ಕೆ ಹೀಗೆ ದುಃಖಿಸುತ್ತೀರಿ. ಹಮೀದ್ ಭಯ್ಯನನ್ನು ಜಾತಿಭೂತ ಹಿಡಿದಿದೆ."

"ಮುಖ್ಯೋಪಾಧ್ಯಾಯರು ಹೇಳಿದ ಮಾತು ನಿದರ್ಶನಕ್ಕೆ ಬಂತು.

"ಮುಂದೆ ಏನು ಮಾಡುತ್ತೀರಿ."

"ಫ್ಯಾಕ್ಟರಿ ಮುಚ್ಚಬೇಕಾಗುತ್ತದೆಯೋಏನೋ?"

ಮಾರನೆಯ ದಿನ ಕಾಗದ ಪತ್ರಗಳಾದವು. ಹಮೀದ್

ತನಗೂ ಫ್ಯಾಕ್ಟರಿಗೂ ಯಾವ ಸಂಬಂಧವೂ ಇಲ್ಲವೆಂದು ಬರೆದು ಕೊಟ್ಟು ಹಣ ತೆಗೆದುಕೊಂಡು ಹೊರಟುಹೋದ.

ಅವನು ಹೋದ ಕೂಡಲೆ ಕೆಲಸಗಾರರು ದಾವೂದನನ್ನು ಮುಂದೆ ಮಾಡಿಕೊಂಡು ಬಂದು

"ಬಾಬು, ನಮ್ಮ ಲೆಕ್ಕ ಹರಿಸಿಬಿಡಿ" ಎಂದರು.

"ಏಕೆ ದಾವೂದ್ ?"

"ನಾವೆಲ್ಲಾ ಈ ಫ್ಯಾಕ್ಟರಿ ಬಿಡಲು ನಿಶ್ಚಯಿಸಿದ್ದೇವೆ."

"ಕೊಡುತ್ತಿರುವ ಸಂಬಳ ಸಾಲದೇ ?"

"ಸಂಬಳದ ಪ್ರಶ್ನೆಯಲ್ಲ. ನಮಗೆ ಕೆಲಸಮಾಲು ಇಷ್ಟವಿಲ್ಲ."

"ದಾವೂದ್ – ನಿನಗೂ ಇಷ್ಟವಿಲ್ಲವೇ ?"

"ಇಲ್ಲ ಸರ್ಕಾರ್."

"ಈ ಫ್ಯಾಕ್ಟರಿಯ ಪುರೋಭಿವೃದ್ಧಿಗೆ ನೀನು ಬಹುಮಟ್ಟಿಗೆ ಕಾರಣ ಕರ್ತ ದಾವೂದ್. ನಿನ್ನ ಉಪಕಾರ ನಾನೆಂದಿಗೂ ಮರೆಯುವಂತಿಲ್ಲ."

"ತಾವು ದೊಡ್ಡ ಮನುಷ್ಯರು ಸರ್ಕಾರ್."

"ಹಾಗಾದರೆ ಈಗ ನನ್ನಲ್ಲಿ ಯಾವ ಕುಂದುಕೊರತೆ ಕಂಡೆ."

"ಯಾವದೂ ಇಲ್ಲ. ನಮ್ಮನ್ನೆಲ್ಲಾ ಅಣ್ಣತಮ್ಮಂದಿರಂತೆ ನಡೆಸಿ ಕೊಂಡಿರಿ."

"ಅಸಮಾಧಾನಕ್ಕೆ ಏನೂ ಕಾರಣವಿಲ್ಲದೆ ಎಲ್ಲರೂ ಬಿಡುತ್ತಿರು ವಿರಾ ?"

"ಸರ್ಕಾರ್–ನಮ್ಮ ಲೀಗಿನ ಹುಕುಂ ಆಗಿದೆ. ಮುಸಲ್ಮಾನರು ಯಾರೂ ಹಿಂದುಗಳ ಕೈಕೆಳಗೆ ಕೆಲಸಮಾಡುವಂತಿಲ್ಲ."

"ಹಾಗೋ ? ನೀವು ಇದುವರೆಗೆ ಹಮೀದನ ಕೈಕೆಳಗೇ ಕೆಲಸಮಾಡು ತ್ತಿದ್ದಿರಲ್ಲಾ.

"ಹೌದು. ಆದರೆ ಅವನು ಫ್ಯಾಕ್ಟರಿ ಬಿಟ್ಟನಲ್ಲಾ ಸರ್ಕಾರ್."

"ದಾವೂದ್. ಕೈಜೋಡಿಸಿ ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಫ್ಯಾಕ್ಟರಿ ಬಿಡಬೇಡಿ. ಇದು ನನ್ನದು ಹೇಗೋ ಹಾಗೇ ನಿಮ್ಮದೂ ಆಗಿದೆ. ಬೇಕಾದ ಸಂಬಳ ತೆಗೆದುಕೊಳ್ಳಿ. ಬರುವ ಲಾಭದಲ್ಲಿ ಒಂದು ಭಾಗ

ಹಂಚಿಕೊಳ್ಳಿ. ಮೊದಲಿನಂತೆ ವಿಶ್ವಾಸದಿಂದ ಜತೆಯಲ್ಲಿ ಕೆಲಸ ಮಾಡೋಣ."

"ಅದು ಸಾಧ್ಯವಾಗದ ಮಾತು ಸರ್ಕಾರ್. ಕ್ಷಮಿಸಿ."

ಅನಿಲಬಾಬುವಿಗೆ ಬೇರೆ ಮಾರ್ಗವೇ ಉಳಿಯಲಿಲ್ಲ. ಎಲ್ಲರ ಸಂಬಳ ಕೊಟ್ಟು, ಪ್ರತಿಯೊಬ್ಬರಿಗೂ ಒಂದೊಂದು ತಿಂಗಳ ಸಂಬಳ ಹೆಚ್ಚು ಕೊಟ್ಟ. ದಾವೂದನಿಗೆ ಹಣ ಕೊಡುತ್ತಾ

"ದಾವೂದ್. ಹೋಗುವುದನ್ನು ನಿಶ್ಚಯಿಸಿದ್ದೀರಿ. ನಿಮ್ಮ ಮನಸ್ಸನ್ನು ತಿರುಗಿಸಲು ನನ್ನಿಂದ ಸಾಧ್ಯವಿಲ್ಲ. ಹೋಗಿ– ದೇವರು ನಿಮಗೆ ಒಳ್ಳೆಯದು ಮಾಡಲಿ. ಆದರೆ ವಿನಾಕಾರಣ ಹಿಂದುಗಳನ್ನು ದ್ವೇಷ ಮಾಡಬೇಡಿ. ಲೀಗ್ ಹೇಳಲಿ ಯಾರೇ ಹೇಳಲಿ ಈ ಹಿಂದೂಸ್ಥಾನ ನಮ್ಮಿಬ್ಬರದೂ ಆಗಿದೆ. ಇದು ಇಂತು ಬೆಳೆಯುವುದಕ್ಕೆ ಹಿಂದೂ–ಮುಸ್ಲಿಮರಿಬ್ಬರೂ ಕಾರಣಕರ್ತರು. ಲೀಗ್ ಇಂದು ನಿಮ್ಮನ್ನು ತಪ್ಪುಹಾದಿ ತುಳಿಸುತ್ತಿದೆ. ನಾಳೆ ನಿಮಗೇ ವಿವೇಕ ಬರುತ್ತದೆ."

"ಸರ್ಕಾರ್, ಲೀಗ್ ಬಗ್ಗೆ ಟೀಕೆ ಮಾಡಬೇಡಿ"

ಎಂದು ಹಣ ತೆಗೆದುಕೊಂಡು ಹೊರಟುಹೋದ.

ಫ್ಯಾಕ್ಟರಿಯ ಕೆಲಸಗಾರರೆಲ್ಲ ಮುಸಲ್ಮಾನರೇ ಆಗಿದ್ದರು. ಅದನ್ನು ಬಾಗಿಲುಹಾಕುವ ಹೊತ್ತು ಬಂತೆಂದು ಬಾಬು ಮರುಗಿದ. ಅಳಿದುಳಿದ ಮೂರು ಜನ ಹಿಂದೂ ಕೆಲಸಗಾರರನ್ನೇ ಇಟ್ಟುಕೊಂಡು ಸಣ್ಣ ಪ್ರಮಾಣದಲ್ಲಿ ಫ್ಯಾಕ್ಟರಿಯನ್ನು ನಡೆಸಿಕೊಂಡು ಹೋಗುವುದೆಂದು ನಿಶ್ಚಯಿಸಿದ.

ಸಂಜೆ ಮನೆಗೆ ಬಂದಾಗ ಬೀಣಾ ಹೊರಟು ನಿಂತಿದ್ದಳು. ಫ್ಯಾಕ್ಟರಿಯಲ್ಲಿ ನಡೆದುದನ್ನು ಬಾಬು ಹೆಂಡತಿಗೆ ತಿಳಿಸಿದ.

"ಹಮೀದ್ ನಿಮ್ಮ ಜತೆಗೆ ಬರುವುದಕ್ಕೆ ಮುಂಚೆ ಫ್ಯಾಕ್ಟರಿ ನಡೆಯುತ್ತಿರಲಿಲ್ಲವೇ" ಎಂದು ಬೀಣಾ ಕೇಳಿದಳು.

"ನಡೆಯುತ್ತಿತ್ತು."

"ಈಗಲೂ ನಡೆಯುತ್ತಿದೆ. ಅದಕ್ಕೇಕಿಷ್ಟು ಯೋಚನೆ."

"ಅದಕ್ಕಲ್ಲ ಯೋಚನೆ. ದೇಶದಲ್ಲಿ ಹಿಂದೂ – ಮುಸ್ಲಿಮ ವೈಮನಸ್ಯ ಕವರುತ್ತಿದೆಯಲ್ಲಾ ಎಂದು ಯೋಚನೆ."

"ಕಾಲಕಾಲಕ್ಕೆ ಬರುವುದನ್ನು ಅನುಭವಿಸಲೇಬೇಕು."

"ನೀನೆಲ್ಲಿಗೆ ಹೊರಟು ನಿಂತಿದ್ದೀ."

"ನೂರ್ ನೋಡಿ ಬಹಳ ದಿವಸವಾಯಿತು. ಹೋಗಿ ಬರುತ್ತೇನೆ."

"ಹೋಗಿ ಬಾ"

ಎಂದ.

ಬೀಣಾ ಬಂದುದನ್ನು ಕಂಡು ನೂರ್ ಹಿರಿಹಿರಿ ಹಿಗ್ಗಿದಳು.

"ಏಕೆ ನೂರ್–ನಮ್ಮನ್ನು ಮರೆಯಲು ಪ್ರಯತ್ನಿಸುತ್ತಿದ್ದೀಯೇನು?"

"ಇಲ್ಲ ದೀದಿ ನಾನು...."

"ಹೇಳು, ಅರ್ಧದಲ್ಲಿಯೇ ನಿಲ್ಲಿಸಬೇಡ."

"ನಾನು....ನಿಮ್ಮ ಮನೆಗೆ ಹೋಗಕೂಡದೆಂದು ಮನೆಯಲ್ಲಿ ಕಟ್ಟಾಜ್ಞೆ."

"ಹಾಗೇ ನಾನೂ ಬರಕೂಡದೆಂದು ಆಜ್ಞೆ ಹೊರಟಿದೆಯೇ?"

"ಆ ವಿಷಯ ಇನ್ನಿದುವರೆಗೆ ಬಂದಿಲ್ಲ."

ಫ್ಯಾಕ್ಟರಿ ಕಥೆಯನ್ನು ಬೀಣಾ ನೂರಳಿಗೆ ತಿಳಿಸಿದಳು.

"ನಾನೇನು ಮಾಡುವುದಕ್ಕಾಗುತ್ತದೆ ದೀದಿ. ನಮ್ಮ ಮಾತು ಕೇಳುವವರು ಯಾರು?"

"ನಿಮ್ಮ ಧರ್ಮದಲ್ಲಿ ಸ್ತ್ರೀಗೆ ಸಮಾನಾಧಿಕಾರವಿದೆಯಲ್ಲ?"

ಹೌದು ಕುರಾನಿನಲ್ಲಿ. ಆಚರಣೆಯಲ್ಲಿ ಹಾಗಿಲ್ಲ. ಮನೆಯಲ್ಲಿ ನಾವು ಹರಕು ಚಡಾವಿಗಿಂತ ಕಡೆ."

"ಭಯ್ಯಾ ನಿನಗೆ ಫ್ಯಾಕ್ಟರಿ ವಿಷಯ ತಿಳಿಸಲಿಲ್ಲವೇ?"

"ನನಗೆ ಯಾವದನ್ನೂ ತಿಳಿಸುವುದಿಲ್ಲ ದೀದಿ."

ಫ್ಯಾಕ್ಟರಿಯ ಲೆಕ್ಕ ಹರಿಸಿ ಹಮೀದ ಹೊರಟುಹೋದ ವಿಷಯವನ್ನು ಕೂಲಂಕಷವಾಗಿ ನಿರೂಪಿಸಿ

"ನೂರ್–ಇದರಿಂದ ಯಾರಿಗೆ ಏನು ಪ್ರಯೋಜನ?"

"ನಾನು ಕಾಣೆ ತಾಯಿ."

"ನೂರ್ – ಏನೇ ಬಂದರೂ ನೀನು ಸ್ನೇಹ ಮುರಿಯುವುದಿಲ್ಲವಷ್ಟೆ?"

"ದೀದಿ – ನಾನೂ ಹೆಣ್ಣು ಜಾತಿಗೆ ಸೇರಿದವಳು. ನನ್ನ ಹೃದಯ ದಲ್ಲಿಯೂ ಪ್ರೇಮ, ದಯೆ, ಕನಿಕರಗಳಿವೆ."

ಬೀಣಾ ನೂರಳನ್ನು ಅಪ್ಪಿದಳು. ಇಬ್ಬರೂ ತೆಕ್ಕೆಬಿದ್ದು ಮನದಣಿಯ ಅತ್ತುಬಿಟ್ಟರು. ಅಕ್ಕತಂಗಿಯರ ಪ್ರೀತಿಯ ಕಟ್ಟನ್ನು ಲೀಗ್ ಸಡಲಿಸ ಲಾಗಲಿಲ್ಲ.

ಬೀಣಾ ಮನೆಗೆ ಬಂದಾಗ ಬಾಬು ತಲೆಯ ಮೇಲೆ ಕೈಹೊತ್ತು ಕುಳಿತಿರುವುದನ್ನು ಕಂಡಳು. ಅವನ ಸ್ಥಿತಿಯನ್ನು ಕಂಡು ಅವಳಿಗೆ ಭಯ ವಾಯಿತು. ಸಮೀಪಕ್ಕೆ ಬಂದು

"ಏಕೆ ಹೀಗಿದ್ದೀರಿ. ?"

"ಬೀಣಾ...."

ಬಳಬಳ ಅವನ ಕಣ್ಣಲ್ಲಿ ನೀರು ಸುರಿಯಿತು.

"ಏನಾಯಿತು? ಹೇಳಿ – ಸಮಾಧಾನ ತಂದುಕೊಳ್ಳಿ."

"ಚೌಧುರಿ ಹಿಂದಿರುಗಿದ್ದಾನೆ."

"ಏನು ಸುದ್ದಿ ತಂದ ?"

"ಬಿನಯ್‌ನನ್ನು ಯಾರೋ ಚೂರಿಯಿಂದ ಇರಿದರಂತೆ. ಅವನು ಮೃತಪಟ್ಟ."

ಬೀಣಾ ನಿಂತಲ್ಲಿಯೇ ಕುಸಿದಳು. ಬಾಬು ಅವಳನ್ನು ಉಪ ಚರಿಸಬೇಕಾಯಿತು.

"ಇನ್ನೇನು ಹೇಳಿದ ಚೌಧುರಿ ?"

"ಚೌಧುರಿಗೆ ಬಿನಯನ ದರ್ಶನವೇ ಸಿಗಲಿಲ್ಲವಂತೆ. ಅವನಿಗೂ ಚೂರಿಯೇಟು ಬಿದ್ದಿದೆ. ಇಬ್ಬರು ಸಿಖ್ಖರು ಬಂದು ಅವನನ್ನು ರಕ್ಷಿಸಿದರಂತೆ."

ಬೀಣಾ ಒಳಗೆ ಧಾವಿಸಿದಳು. ತಾಯಿ ಗಾಯಿತ್ರಿ ದಂಗು ಹಿಡಿದವ ಳಂತೆ ಕುಳಿತುಬಿಟ್ಟಿದ್ದಳು. ಮುದುಕಿಯನ್ನಪ್ಪಿಕೊಂಡು ಬೀಣಾ ಗೊಳೋ ಎಂದು ಅತ್ತಳು. ಮನೆ ದುಃಖದ ಕಡಲಾಯಿತು.

ಸುದ್ದಿ ಕಿಚ್ಚಿನಂತೆ ವ್ಯಾಪಿಸಿತು. ಮುಖರ್ಜಿ ಬಂದು ಬಾಬುವಿಗೆ ಸಮಾಧಾನ ಹೇಳಿದರು. ವೇದಾಂತಿ ಮುಖರ್ಜಿ ರೋಷದಿಂದ ತಪ್ತರಾ ಗಿದ್ದರು. ಬಾಬುವಿನ ಅಂಗಡಿ ಸುದ್ದಿ ಕೇಳಿ

" ಹೆದರಬೇಡ ಅನಿಲ್-ನಿನ್ನ ಫ್ಯಾಕ್ಟರಿ ಕೆಲಸ ಮಾಡಬಲ್ಲ ನಾಮ ಶೂದ್ರರಿದ್ದಾರೆ. ಅವರನ್ನು ನಾನು ಕರೆದುಕೊಂಡು ಬರುತ್ತೇನೆ. ಇನ್ನು ಮೇಲೆ ಹಿಂದುಗಳೆಲ್ಲಾ 'ಬಂಗಾಳ ಬೀಡಿ' ಬಿಟ್ಟು ಬೇರೆ ಸೇದಬಾರದೆಂದು-ಕೊಳ್ಳಬಾರದೆಂದು ನಾನು ಪ್ರಸಾರಮಾಡುತ್ತೇನೆ. "

" ಹೋಗಲಿ ಬಿಡಿ ಮಾಸ್ಟರ್ ಮಹಾಶಯ್. ಏಕೆ ಸುಮ್ಮನೆ ಇಲ್ಲದ ಗೊಂದಲ.? "

" ಈಗ ನೀನು ಅಳುಕಿದರೆ ಬಂಗಾಳದಲ್ಲಿ ಹಿಂದುಗಳು ತಲೆಯೆತ್ತ ದಂತಾಗುತ್ತದೆ. ಇದು ನಿನ್ನೊಬ್ಬನ ಹಿತದ ಪ್ರಶ್ನೆಯಲ್ಲ-ಇಡೀ ಸಮಾಜದ ಪ್ರಶ್ನೆ. ಮುಸಲ್ಮಾನರ ನೆರವಿಲ್ಲದೆ ಹಿಂದುಗಳು ಬದುಕಬಲ್ಲರೆಂಬುದನ್ನು ಅವರಿಗೆ ನಾವು ತೋರಿಸಿಕೊಡಬೇಕು. "

" ಇದು ವೃಥಾ ಜಗಳಕ್ಕೆ ಕಾರಣವಾಗುತ್ತದೆ? "

" ಕಾಲುಕೆರೆದು ಜಗಳಕ್ಕೆ ಕರೆಯುತ್ತಿರುವವರು ಯಾರು? ಹಮೀದ ನನ್ನು, ಕೆಲಸಗಾರರನ್ನು ಫ್ಯಾಕ್ಟರಿ ಬಿಡಿಸಿದವರು ಯಾರು? ಬಿನಯ್‌ಬಾಬು ವನ್ನು ಇರಿದುಕೊಂದವರು ಯಾರು? ಬಾಬು-ಬಿನಯನಿಗೆ ನೀನು ನೀಡಬೇಕಾದ ತರ್ಪಣವೊಂದಿದೆ-ಮರೆಯಬೇಡ "

ಎಂದು ಎಚ್ಚರಿಸಿದರು.

ಮುಖರ್ಜಿ ಶಾಲಾ ಮಾಸ್ತರಾಗಿದ್ದರೂ ಹರಟೇಮಲ್ಲರಲ್ಲ. ಮುದುಕನ ತೋಳಿನಲ್ಲಿ ಸಿಂಹ ಬಲವಿತ್ತು; ಎದೆಯಲ್ಲಿ ವಜ್ರ ಕಾಠಿಣ್ಯವಿತ್ತು. ಮಾರನೆಯ ದಿನವೇ ಹತ್ತು ಜನ ನಾಮಶೂದ್ರರನ್ನು ಕರೆತಂದು ಅನಿಲ ಬಾಬುವಿಗೆ ಒಪ್ಪಿಸಿದರು. ಫ್ಯಾಕ್ಟರಿಯಲ್ಲಿದ್ದ ಅರಿತ ನುರಿತ ಹಿಂದೂ ಕೆಲಸ ಗಾರರು ಅವರನ್ನು ತರಬೇತು ಮಾಡುವುದೆಂದು ನಿಶ್ಚಯವಾಯಿತು.

ಹಮೀದ್‌ಬಾಬು ಫ್ಯಾಕ್ಟರಿ ಬಿಟ್ಟವನೇ ಸುಮ್ಮನೆ ಕೂಡಲಿಲ್ಲ. ಅವನೇ ಒಂದು ಸ್ವಂತ ಫ್ಯಾಕ್ಟರಿ ತೆಗೆದ. ಅದರಲ್ಲಿ ದಾವೂದ, ಮಸ್ತಾನ್, ಮುಬಾರಕ್ ಮೊದಲಾದ ಕೆಲಸಗಾರರು ನಿಂತರು. ಒಂದೆರಡು ದಿನಗಳಲ್ಲಿ ಬಾಬುವಿನ ಗಿರಾಕಿಯನ್ನೆಲ್ಲಾ ತನ್ನ ಕೈವಶಮಾಡಿಕೊಂಡ. 'ಬಂಗಾಳ ಬೀಡಿ' ಕೊಳ್ಳುತ್ತಿದ್ದ ಸತ್ತಾರ್, ಇಬ್ರಾಹಿಂ ಮೊದಲಾದವರು ತಮ್ಮಲ್ಲಿ ಉಳಿದಿದ್ದ ಮಾಲನ್ನು ಹಿಂದಿರುಗಿಸಿ 'ಇನ್ನು ಮೇಲೆ ನಮಗೆ ಬಂಗಾಳಾ

ಬೀಡಿ' ಕಳುಹಿಸಬೇಕಾಗಿಲ್ಲ ಎಂದು ತಿಳಿಸಿದರು. ಅವರೆಲ್ಲಾ ಹಮೀದನ 'ಪಾಕಿಸ್ತಾನ್ ಬೀಡಿ'ಯ ಮಾರಾಟಗಾರರಾದರು.

ಮುಖರ್ಜಿಯ ಪ್ರಸಾರ ಪ್ರಭಾವದಿಂದ ಅನಿಲಬಾಬು ಬದುಕಿಕೊಂಡ. ಹಿಂದುಗಳು 'ಬಂಗಾಳಾ ಬೀಡಿ'ಯನ್ನಲ್ಲದೆ ಬೇರೆ ಬೀಡಿಯನ್ನು ಕೈಯಿಂದಲೂ ಮುಟ್ಟುತ್ತಿರಲಿಲ್ಲ. ಬಾಬು ಫ್ಯಾಕ್ಟರಿ ಮೊದಲಿನಂತೆ ಕೆಲಸ ಮಾಡತೊಡಗಿತು. ಮುಖರ್ಜಿಯ ಪ್ರಯತ್ನದಿಂದ 'ಬಂಗಾಳಾ ಬೀಡಿ' ಬಿಹಾರಿನವರೆಗೆ ಹೋಗುವಂತಾಯಿತು.

ಈಯೆಲ್ಲ ಸುದ್ದಿಗಳನ್ನು ಕೇಳಿ ಹಮೀದ ಬಾಲಸುಟ್ಟ ಕಪಿಯಂತಾದ ತಾನೂ, ಕೆಲಸಗಾರರೂ ಫ್ಯಾಕ್ಟರಿ ಬಿಟ್ಟ ಕೂಡಲೆ ಬಾಬು ಅದನ್ನು ಮುಚ್ಚಿ ತನಗೇ ಫ್ಯಾಕ್ಟರಿಯನ್ನು ಅಲ್ಪ ಬೆಲೆಗೆ ಮಾರಿಬಿಡುತ್ತಾನೆಂದು ಅವನು ಎಣಿಕೆಹಾಕಿಕೊಂಡಿದ್ದ. ಆದರೆ ಅವನ ಎಣಿಕೆ ತಪ್ಪಿತ್ತು. ಹಮೀದ ರೋಷದಿಂದ ಕುದಿಯತೊಡಗಿದ.

ಇದ್ದಕ್ಕಿದ್ದಂತೆ ರಾಮ್‌ಗಂಜ್ ದೊಡ್ಡಷಹರಿನಂತೆ ಚೇತನಗೊಳ್ಳುತ್ತ ಬಂತು. ಕಲ್ಕತ್ತೆಯಿಂದ ದಿನಕ್ಕೆ ನೂರಾರು ಲಾರಿಗಳು ಬಂದು ಹೋಗುತ್ತಿದ್ದವು. 'ಅದು ಏನು' ಎಂದು ಕೇಳಿದರೆ 'ಅಕ್ಕಿಯ ಮೂಟೆಯ ಲಾರಿಗಳು' ಎಂದು ಉತ್ತರ ಬರುತ್ತಿತ್ತು. ಗಾಳಿಯೇ ಬಿಸಿಯಾದಂತೆ ಕಂಡುಬಂತು. ರಾಮುಗಂಜಿನಲ್ಲಿ ನೂರಾರು ಹೊಸ ಮುಖಗಳು ಕಂಡು ಬಂದವು. ಅವರು ಯಾರೋ ಯಾರೂ ಅರಿಯರು.

ಮನೆಯಲ್ಲಿ ಹಮೀದನ ವರ್ತನೆ ವಿಚಿತ್ರವಾಗುತ್ತ ಬಂತು. ಯಾರೋ ಬರುತ್ತಿದ್ದರು. ಅವರೊಂದಿಗೆ 'ಪಿಸಪಿಸ-ಗುಸಗುಸ' ಮಾತನಾಡುತ್ತಾ ಇದ್ದ. ಅವರನ್ನು ನೋಡಿ ನೂರ್ ಹೆದರಿದ್ದಳು. ರಾತ್ರಿಮನೆಬಿಟ್ಟು ಹೋಗುತ್ತಿದ್ದ. ಅವನು ಹಿಂದಿರುಗುವುದು ೨-೩ ಗಂಟೆಗೆ. ಒಂದು ದಿನರಾತ್ರಿ ಹಮೀದ ಮನೆಗೆ ೫೦ ಪೆಟ್ರೋಲ್ ಕ್ಯಾನ್‌ಗಳನ್ನು ೨೦ ಸೀಮೆಯೆಣ್ಣೆ ಡಬ್ಬಗಳನ್ನು ತಂದಿಟ್ಟು ಅವುಗಳ ಮೇಲೆ ಗೋಣಿಯ ತಟ್ಟು ಮುಚ್ಚಿದ.

"ಇವೇನು" ಎಂದು ಕೇಳಿದಳು ನೂರ್.

"ಬೀಗಂ, ಈಗ ನನ್ನ ಫ್ಯಾಕ್ಟರಿಯಲ್ಲಿ ೨೦೦ ಜನ ಕೆಲಸಮಾಡುತ್ತಿದ್ದಾರೆ ಗೊತ್ತೇ?"

"ಇರಬಹುದು. ಅದಕ್ಕೂ ಇದಕ್ಕೂ ಏನು ಸಂಬಂಧ?"

"ಬೀಡಿ ತಯಾರಿ ಲಕ್ಷಗಟ್ಟಳೆ ಆಗುತ್ತಿದೆ. ಅವುಗಳನ್ನು ಸಾಗಿಸಲು ಲಾರಿ ಕೊಳ್ಳುತ್ತೇನೆ. ಈಗಿನಿಂದಲೇ ಎಣ್ಣೆ ಪೆಟ್ರೋಲ್ ದಾಸ್ತಾನು ಮಾಡುತ್ತಿದ್ದೇನೆ."

"ರಾತ್ರಿ ಬಂದು ಪಿಸಪಿಸ ಮಾತನಾಡುವ ಇವರು ಯಾರು?"

"ಇವರೇ ಪೆಟ್ರೋಲ್ ಒದಗಿಸುವವರು."

"ಅವರು ರಾತ್ರಿಯೇ ಬರಬೇಕೇನು?"

"ನಾನು ಪೆಟ್ರೋಲ್ ಕೊಳ್ಳುತ್ತಿರುವುದು ಕಾಳಸಂತೆಯಲ್ಲಿ. ಬೆಳಗ್ಗೆ ಹೊತ್ತು ಈ ವ್ಯಾಪಾರ ಮಾಡಿದರೆ ಸರ್ಕಾರ ಹಿಡಿದುಕೊಂಡು ಹೋಗುತ್ತದೆ."

"ಇಂಥ ಕಳ್ಳ ವ್ಯಾಪಾರ ನಮಗೇಕೆ? ದೇವರು ಕೈತುಂಬ ಕೊಡುತ್ತಿರುವಾಗ ದುರಾಶೆಗೆ ಬಲಿಯಾಗುವುದು ನ್ಯಾಯವೆ?"

"ಬೀಣಾ ಹೇಳಿಕೊಟ್ಟ ಪಾಠ ಗಿಣಿಹಾಗೆ ಒಪ್ಪಿಸಬೇಡ ನೂರ್. ಇದು ನಿನಗೆ ತಿಳಿಯುವ ವಿಷಯವಲ್ಲ"

ಎಂದು ಹೆಂಡತಿಯ ಬಾಯಿಮುಚ್ಚಿದ.

ಊರಿನಲ್ಲಿ ಹಲವು ಹನ್ನೊಂದು ಸುದ್ದಿಗಳು ಹೊರಟವು. ಹಿಂದುಗಳು ಹೊರಟರೆ ಅವರನ್ನು ಗುಪ್ತವಾಗಿ ಗೂಂಡಾಗಳು ಹಿಂಬಾಲಿಸುತ್ತಿದ್ದರು. ಯಾರ ಕೈಯಲ್ಲಿ ನೋಡಿದರೂ ಒಂದು ದೊಣ್ಣೆ.

ಒಂದು ಸಂಜೆ ಬಾಬು ಇನ್ನೂ ಮನೆಗೆ ಬಂದಿರಲಿಲ್ಲ. ಬೀಣಾ ಶುಭಳಿಗೆ ಬಾಯಿಪಾಠ ಹೇಳಿಕೊಡುತ್ತ ಕುಳಿತಿದ್ದಳು. ತಲೆಬಾಗಿಲು ಯಾವಾಗಲೂ ಹಾಕಿರುತ್ತಿತ್ತು. ಯಾರೋ ಬಾಗಿಲು ತಟ್ಟಿದಂತಾಯಿತು. "ಯಾರೂ" ಎಂದಳು.

"ನಾನೂ – ನೂರ್ – ಬೇಗ ಬಾಗಿಲು ತೆಗೆ ದೀದಿ."

ಬೀಣಾ ಬಾಗಿಲು ತೆಗೆಯುತ್ತಲೆ ನೂರ್ ಒಳಗೆ ಬಂದು ಬಾಗಿಲು ಹಾಕಿದಳು.

"ಏನು ನೂರ್ – ಇಷ್ಟು ಗಾಬರಿಯಾಗಿ ಬಂದಿದ್ದೀ–ಈ ಹೊತ್ತಿನಲ್ಲಿ"

"ಬೆಳಗ್ಗೆ ಯಜಮಾನರು ಆಚ್ಛಾದ ಹಾಳೆಗಳ ಕಟ್ಟುಗಳನ್ನು ತಂದು

ಬಹಳ ಜೋಪಾನದಿಂದ ಮುಚ್ಚಿಟ್ಟಿರು. ಅದೇನೆಂದು ಕೇಳಿದರೆ ಹೇಳಲಿಲ್ಲ. ನನಗೆ ಅವರ ಚಲನವಲನ, ಸಹವಾಸ ಒಂದೂ ಸರಿಬೀಳುತ್ತಿಲ್ಲ. ನೋಡು ದೀದಿ– ಇದೇನು?"

ಎಂದು ಬೀಣಳ ಕೈಗೆ ಒಂದು ಅಚ್ಚಾದ ಪ್ರಕಟನಪತ್ರವ ನ್ನಿತ್ತಳು. ಬೀಣಾ ಓದಿಕೊಂಡು

"ಇದೇ – ಬೀಡಿಯ ಜಾಹೀರಾತು."

"ಸದ್ಯಃ, ಸಮಾಧಾನವಾಯಿತು. ದೀದಿ, ಒಂದು ಮಾತು ನಾನು ಹೇಳಲೇ ಬೇಕು. ನೀನೂ, ಬಾಬು, ತಾಯಿ, ಶುಭಾ ಎಲ್ಲಾ ನಾಲ್ಕುದಿವಸ ಎಲ್ಲಿಯಾದರೂ ಹೋಗಿಬಿಡಿ. ರಾಮುಗಂಜಿನಹವಾ ಬಹಳ ಕೆಟ್ಟುಹೋಗಿದೆ."

"ಅವರು ಮನೆಗೆ ಬರಲಿ ಹೇಳುತ್ತೇನೆ. ನೂರ್ – ನಿನ್ನ ಉಪಕಾರಕ್ಕೆ ನಾನು ತುಂಬ........"

"ಉಪಚಾರದ ಮಾತಿರಲಿ ದೀದಿ–ನಾನು ಮನೆಗೆ ಹೋಗುತ್ತೇನೆ, ಅವರಿಗೆಲ್ಲಾದರೂ ಅನುಮಾನ ಬಂದೀತು"

ಎಂದು ನೂರ್ ಹಿಂದಿರುಗಿದಳು.

ಬೀಣಾ ಪ್ರಕಟನ ಪತ್ರವನ್ನು ಹತ್ತಾರು ಬಾರಿ ಓದಿನೋಡಿದಳು. ಅವಳ ಎದೆ ಹೊಡೆದುಕೊಳ್ಳಲಾರಂಭಿಸಿತು. ಗಂಡ ಮನೆಗೆ ಬರುವುದನ್ನೇ ಕಾಯುತ್ತಿದ್ದಳು. ಅವನು ಬಂದಕೂಡಲೆ ಪತ್ರ ಕೊಟ್ಟಳು – ಬಾಬು ಅದ ನ್ನೋದಿದ. ಅವನ ಮೈಮುಖವೆಲ್ಲ ಬೆವರಿನಲ್ಲಿ ಅದ್ದಿದಂತಾಯಿತು.

"ಬೀಣಾ– ನಾನು ಮಾಸ್ಟರ್ ಮಹಾಶಯರನ್ನು ಕಂಡು, ಇದನ್ನು ಅವರಿಗೂ ತೋರಿಸಿಬರುತ್ತೇನೆ. ಮನೆಯ ಕಡೆ ಎಚ್ಚರ. ತಲೆಬಾಗಿಲು ತೆಗೆಯಬೇಡಿ"

ಎಂದು ಹೇಳಿ ಮಾಸ್ಟರ್ ಮನೆ ಕಡೆ ಓಡಿದ.

ಮಾಸ್ಟರ್ ಮಹಾಶಯ ಪ್ರಕಟನೆಯನ್ನು ಓದಿಕೊಂಡು, ಸುತ್ತ ಮುತ್ತಲಿದ್ದ ಹಿಂದೂಗಳನ್ನು ಸೇರಿಸಿ ಅದನ್ನು ಓದಿದರು.

"ಮುಸ್ಲಿಂ ಲೀಗ್ ಕಾರ್ಯ ಸಮಿತಿಯ ಪ್ರಕಟನೆ :—

೧) ಹಿಂದೂಸ್ಥಾನದ ಎಲ್ಲ ಮುಸ್ಲಿಮರೂ ಪಾಕೀಸ್ಥಾನ ಸಾಧನೆ ಗಾಗಿ ಪ್ರಾಣ ಒಪ್ಪಿಸಲು ಸಿದ್ಧರಾಗಿರಬೇಕು.

೨) ಪಾಕೀಸ್ಥಾನ ಸ್ಥಾಪನೆಯಾದೊಡನೆಯೇ ಇಡೀ ಭಾರತವನ್ನು ಗೆಲ್ಲಬೇಕು.

೩) ಹಿಂದೂಸ್ಥಾನದ ಎಲ್ಲ ಜನಗಳನ್ನೂ ಇಸ್ಲಾಂ ಧರ್ಮಕ್ಕೆ ಮತಾಂತರ ಗೊಳಿಸಬೇಕು.

೪) ಮುಸ್ಲಿಂ ರಾಜ್ಯ ಜಗತ್ತಿನ ಸ್ವಾಮ್ಯಕ್ಕಾಗಿ ಆಂಗ್ಲ–ಅಮೆರಿಕ ರಾಜ್ಯಗಳೊಂದಿಗೆ ಕೈಗೂಡಿಸಬೇಕು.

೫) ಒಬ್ಬ ಮುಸ್ಲಿಮನಿಗೆ ಐದು ಹಿಂದುಗಳು ಸಮ. ಪ್ರತಿಯೊಬ್ಬ ನಿಗೂ ಐದು ಹಿಂದುಗಳ ಅಧಿಕಾರ, ಹಕ್ಕನ್ನು ದೊರಕಿಸಿಕೊಳ್ಳಬೇಕು.

೬) ಪಾಕೀಸ್ಥಾನ ಹಾಗೂ ನಮ್ಮ ಚಕ್ರಾಧಿಪತ್ಯ ಸ್ಥಾಪನೆಯಾ ಗುವವರೆಗೆ ಈ ಬಗೆಯ ಕಾರ್ಯಕ್ರಮವನ್ನು ಕೈಗೊಳ್ಳಬೇಕು.

೭) ಹಿಂದುಗಳ ಎಲ್ಲ ಫ್ಯಾಕ್ಟರಿಗಳು, ಅಂಗಡಿಗಳು, ಮಳಿಗೆಗಳನ್ನು ಸುಟ್ಟು ಭಸ್ಮಮಾಡಬೇಕು. ಅವುಗಳನ್ನು ಕೊಳ್ಳೆಹೊಡೆದು, ಕೊಳ್ಳೆಯನ್ನು ಲೀಗ್ ಕಛೇರಿಗೆ ಒಪ್ಪಿಸಬೇಕು.

೮) ಲೀಗಿನ ಎಲ್ಲ ಸದಸ್ಯರೂ ಆತ್ಮರಕ್ಷಣೆಗಾಗಿ ಆಯುಧಗಳನ್ನು ಹಿಡಿಯಬೇಕು.

೯) ಲೀಗಿಗೆ ಸೇರದಿರುವ ರಾಷ್ಟ್ರೀಯ ಮುಸ್ಲಿಮರನ್ನು ಲೀಗಿನ ಗುಪ್ತ ದಳದವರು ಕೊಲೆಮಾಡಬೇಕು.

೧೦) ಹಿಂದೂ ದೇವಸ್ಥಾನಗಳನ್ನು ನಿರ್ಮೂಲಮಾಡಬೇಕು.

೧೧) ಹಿಂದೂಸ್ಥಾನದ ಪ್ರತಿಯೊಂದು ಹಳ್ಳಿ, ಜಿಲ್ಲೆಯಲ್ಲಿಯೂ ಲೀಗಿನ ಗೂಢಚಾರರಿರಬೇಕು.

೧೨) ಪವಿತ್ರಕಾರ್ಯವೆಂದು ಭಾವಿಸಿ ತಿಂಗಳಿಗೊಬ್ಬನಂತೆ ಕಾಂಗ್ರೆಸ್ ಮುಖಂಡರನ್ನು ಬಲಿಹಾಕಬೇಕು.

೧೩) ಲೀಗಿನ ಗುಪ್ತದಳದವರು ಕಾಂಗ್ರೆಸ್ ಪತ್ರಿಕೆಗಳ ಕಛೇರಿ ಗಳನ್ನು ಧ್ವಂಸಮಾಡಬೇಕು.

೧೪) ಡಿಸೆಂಬರ್ ೧೯೪೬ರ ಒಳಗಾಗಿ ಕರಾಚಿ, ಮುಂಬಯಿ, ಕಲ್ಕತ್ತೆ, ಗೋವಾ, ವಿಶಾಖಪಟ್ಟಣಗಳನ್ನು ಸಹಾಯಶೂನ್ಯಗೊಳಿಸಬೇಕು.

೧೫) ಹಿಂದುಗಳ ಕೈಕೆಳಗೆ ಮುಸ್ಲಿಮರು ಸೈನ್ಯ, ನೌಕೆ, ಖಾಸಗಿ ಸಂಸ್ಥೆಗಳು, ಸರ್ಕಾರಿ ನೌಕರಿಗಳಲ್ಲಿ ಕೆಲಸಮಾಡಕೂಡದು.

೧೬) ಹಿಂದೂಸ್ಥಾನದ ಹಾಗೂ ಕಾಂಗ್ರೆಸ್ ಸರ್ಕಾರಗಳನ್ನು ಮುಸ್ಲಿಮರು ಬುಡಮೇಲು ಮಾಡಬೇಕು.

೧೭) ಇದಕ್ಕೆ ಅನೇಕ ಕಡೆಯಿಂದ ಧನಸಹಾಯವುಂಟಾಗುತ್ತಿದೆ. ಬಂಗಾಳದಲ್ಲಿ ಶಸ್ತ್ರಾಸ್ತ್ರಗಳ ದಾಸ್ತಾನು ಇರಬೇಕು.

೧೮) ಶಸ್ತ್ರಾಸ್ತ್ರಗಳನ್ನು ಮುಂಬಯಿ, ಕಲ್ಕತ್ತೆ, ದೆಹಲಿ, ಮದರಾಸು, ಬೆಂಗಳೂರು, ಲಾಹೋರ್, ಕರಾಚಿ, ಮತ್ತು ಲೀಗಿನ ಶಾಖೆಗಳಿರುವ ಇತರ ಊರುಗಳಿಗೆ ಹಂಚಬೇಕು.

೧೯) ಹಿಂದುಗಳನ್ನು ನಾಶಮಾಡಲು ಎಲ್ಲ ಮುಸ್ಲಿಮರೂ ಸದಾ ಆಯುಧಧಾರಿಗಳಾಗಿರಬೇಕು. ಕೊನೆಗೆ ಒಂದು ಚಾಕುವನ್ನಾದರೂ ಪಡೆದಿರಬೇಕು.

೨೦) ಅಕ್ಟೋಬರ್ ೧೮-೧೯೪೬ ರಿಂದ ಹಿಂದೂ ಹೆಂಗಸರ ಶೀಲ ಭಂಗಮಾಡಿ, ಅಪಹರಿಸಿ ಅವರನ್ನು ಇಸ್ಲಾಮಿಗೆ ಮತಾಂತರಗೊಳಿಸಬೇಕು.

೨೧) ಎಲ್ಲ ವಾಹನ ಸೌಕರ್ಯವನ್ನೂ ಇದಕ್ಕಾಗಿ ಉಪಯೋಗಿಸಬೇಕು.

೨೨) ಹಿಂದೂ ಸಂಸ್ಕೃತಿಯನ್ನು ಸಂಪೂರ್ಣವಾಗಿ ನಾಶಮಾಡಬೇಕು.

೨೩) ಲೀಗಿನವರು ಹಿಂದುಗಳ ಮೇಲೆ ಕಠೋರ ರೀತಿಯಲ್ಲಿ ನಡೆದುಕೊಂಡು ಅವರನ್ನು ಸಾಮಾಜಿಕ, ಆರ್ಥಿಕ, ಇತರ ಜೀವನದಿಂದ ಹೊರಗಟ್ಟಬೇಕು.

೨೪) ಹಿಂದೂ ವ್ಯಾಪಾರಿಗಳಿಂದ ಮುಸ್ಲಿಮರು ಏನನ್ನೂ ಕೊಳ್ಳಕೂಡದು. ಹಿಂದುಗಳು ತಯಾರಿಸುವ ಚಲನಚಿತ್ರಗಳಿಗೆ ಮುಸ್ಲಿಮರು ಬಹಿಷ್ಕಾರ ಹಾಕಬೇಕು. ಇವುಗಳನ್ನು ಎಲ್ಲ ಮುಸ್ಲಿಮರೂ ಚಾ-ಚೂ ತಪ್ಪದೆ ಅನುಸರಿಸಿ ೧೫-೯-೪೬ ರಿಂದ ಆಚರಣೆಗೆ ತರಬೇಕು.”

ಮಾಸ್ಟರ್ ಮಹಾಶಯ ಬಹು ಪ್ರಯಾಸದಿಂದ ಈ ದ್ವೇಷ ಪ್ರಣಾಳಿಕೆಯನ್ನು ಓದಿ ಮುಗಿಸಿದರು. ಯಾರ ಬಾಯಲ್ಲಿಯೂ ಮಾತು ಹೊರಡದು. ಎಲ್ಲರೂ ಭಿತ್ತಿಚಿತ್ರಗಳಂತೆ ಕುಳಿತುಬಿಟ್ಟರು. ಎಲ್ಲಿಂದಲೋ ಕಿವಿಯನ್ನು

ಗಡಚಿಕ್ಕುವಂತೆ 'ದೀನ್–ದೀನ್' ಘೋಷ ಕೇಳಿ ಬಂತು. 'ಏನದು ನೋಡು' ಎಂದು ಮಾಸ್ಟರ್ ಮಹಾಶಯ ಒಬ್ಬನಿಗೆ ಹೇಳಿದರು. ಅವನು ಹೊರಗೆ ಹೋದವನೇ ಚೀರಿದ. 'ಅಯ್ಯೋ' ಎಂಬ ಆರ್ತನಾದ ಅವರ ಹೃದಯಗಳನ್ನು ಹೊಕ್ಕಿರಿದವು–ನಿಶಿಯ ಪ್ರಶಾಂತಿಯನ್ನು ಭೇದಿಸಿಬಿಟ್ಟಿತು.

ಅಲ್ಲಿ ಸೇರಿದ್ದವರು ಮುಂದೇನು ಮಾಡಬೇಕೆಂದು ಯೋಚಿಸುವಷ್ಟರಲ್ಲಿ ನೂರಾರು ಜನ ಮನೆ ಬಳಸಿ, ಒಳನುಗ್ಗಿ ಎಲ್ಲರನ್ನೂ ಹಿಡಿದರು. ಅವರಲ್ಲಿ ನಾಲ್ವರು ಅನಿಲಬಾಬುವನ್ನು ದರದರನೆ ಅವನ ಮನೆಗೆ ಎಳೆದೊಯ್ದರು.

ತನ್ನ ಮನೆ ದುರಾತ್ಮರ ವಶವಾಗಿದ್ದುದನ್ನು ಅನಿಲಬಾಬು ದೂರದಿಂದಲೇ ಕಂಡ.

'ಬೀಣಾ—ಶುಭಾ—ಮಾ' ಎಂದು ಕೂಗಿದ.

ಅವನ ಬಾಯಿ ಅದುಮಿ ತಲೆಯ ಮೇಲೆ ದೊಣ್ಣೆಯಿಂದ ಬಡಿದರು. ಅನಿಲಬಾಬುವನ್ನು ಅವನ ಮನೆಯ ಮುಂದೆ ನಿಲ್ಲಿಸಿದರು. ಒಳಗಿನಿಂದ ಅವನ ತಾಯಿ ಮಗಳು, ಹೆಂಡತಿಯನ್ನು ಎಳೆತಂದರು. ಅವರ ಹಿಂದೆ ಹಮೀದ ಹೊರಬಿದ್ದ. ಹಮೀದನನ್ನು ನೋಡಿ ಬಾಬುವಿಗೆ ಹೋದ ಜೀವ ಬಂದಂತಾಯಿತು.

"ಹಮೀದ್ ಭಾಯ್–ಈ ಅತ್ಯಾಚಾರ ನೀನಾದರೂ ನಿಲ್ಲಿಸು"

ಎಂದು ಬಾಬು ಕೂಗಿದ.

ಹಮೀದನ ಆಜ್ಞೆಯಾಯಿತು. ಶುಭಾಳನ್ನು ಎಳೆದು ತಂದು ಅವನ ಮುಂದೆ ಛಿದ್ರಛಿದ್ರವಾಗಿ ಕಡಿದುಹಾಕಿದರು. ಬಾಬು ಕೆರಳಿದ ಕೇಸರಿಯಾದ. ಆದರೆ ಅವನ ಸಾಹಸ, ಕಾಪಿನ ಹತ್ತಾರು ರಾಕ್ಷಸರ ಮುಂದೆ ಪ್ರಯೋಜನಕ್ಕೆ ಬರಲಿಲ್ಲ.

ಎರಡನೆಯ ಪಾಳಿ ಗಾಯಿತ್ರಿದೇವಿಯದು. ಆ ವಯೋವೃದ್ಧೆಯನ್ನು ವಿವಸ್ತ್ರಮಾಡಿದರು. ನಾಲ್ಕು ಜನ ಅವಳ ಕೈಕಾಲು ಹಿಡಿದು ಶೀಲಭಂಗಮಾಡಿದರು. ಎಲ್ಲಾ ಮುಗಿಸಿ ಎದ್ದು ಒಬ್ಬ ಚೂರಿ ತೆಗೆದು ಅವಳ ಹೃದಯಕ್ಕೆ ನೆಟ್ಟ.

ಮನೆಯ ಪಡಸಾಲೆ ಕಂಬಕ್ಕೆ ಬೀಣಳ ಕೈಗಳನ್ನು ಹಿಂದಕ್ಕೆ

ಸೇರಿಸಿ ಬಿಗಿದರು. ಹಮೀದ್ ಮುಂದೆ ಬಂದು, ಅವಳ ಬಳೆಗಳನ್ನೊಡೆದ. ಅವಳು ಲಿಬಿಲಿಬಿ ವಿಲಗುಟ್ಟಿದಳು – ಹಮೀದ್ ತನ್ನ ಚಡಾವು ತೆಗೆದು ಅವಳ ಹಣೆಯಲ್ಲಿದ್ದ ಕುಂಕುಮ, ಬೈತಲೆಯ ಮೇಲಿದ್ದ ಸಿಂಧೂರ ಒರಸಿದ- ಪಕ್ಕದಲ್ಲಿದ್ದವನಿಂದ ಒಂದು ಚೂರು ಹಸುವಿನ ಮಾಂಸ ತೆಗೆದುಕೊಂಡು ಅವಳ ಬಾಯಿಗಿಟ್ಟ—ಮೌಲ್ವಿ ಸಾಹೇಬರು ಮುಂದೆ ಬಂದು ಹಮೀದ ನಿಗೂ, ಬೀಣಾಳಿಗೂ ನಿಕಾ ಮಾಡಿಸಿದರು.

ಗುಂಪಿನ ಜನ ಕೂಗಿದರು

"ಪಾಕಿಸ್ಥಾನ್ ಜಿಂದಾಬಾದ್ — ದೀನ್ - ದೀನ್"

ಹಮೀದನ ಆಜ್ಞೆಯಾಯಿತು. ಕಾಪಿನವರು ಕತ್ತಿಹಿರಿದು ತುಂಡುತುಂಡಾಗಿ ಅನಿಲಬಾಬುವನ್ನು ಕತ್ತರಿಸಿಯೊಗೆದರು.

—ಬೀಣಾಳಿಗೆ ಜ್ಞಾನತಪ್ಪಿ ಎಷ್ಟೋ ಹೊತ್ತಾಗಿತ್ತು.

ಅವಳನ್ನು ಹೊತ್ತುಕೊಂಡು ಹಮೀದ್ ಮನೆಗೆ ನಡೆದ. ಗುಂಪಿನವರು ಬೇರೆ ಬೇರೆ ಕಡೆಗೆ ಇದೇ ಕೆಲಸದ ಸಲುವಾಗಿ ನಡೆದರು. ಊರಿನ ಹಿಂದು ಅಂಗಡಿಗಳು ಧಗಧಗ ಉರಿಯುತ್ತಿದ್ದವು.

ಬೀಣಾ ಎಚ್ಚೆತ್ತಾಗ ಅವಳ ತೊಡೆ ನೂರಳ ತೊಡೆಯ ಮೇಲಿತ್ತು. ನೂರ್ ಒಂದು ತೊಟ್ಟು ಹಾಲು ಅವಳ ಬಾಯಿಗೆ ಹುಯ್ಯ ಲೆತ್ನಿಸುತ್ತಿದ್ದಳು. ಬೀಣಾ ಕಣ್ಣುಬಿಟ್ಟು ಅದನ್ನು ಒಂದು ಕಡೆಗೆ ನೂಕಿ ದಳು. ನೂರ್ ಒಂದೇ ಸಮನೆ ಕಣ್ಣೀರ್ಗರೆಯುತ್ತಿದ್ದಳು.

ಬೀಣಾ ಮಾತು ನಿಂತುಹೋಯಿತು. ಒಮ್ಮೊಮ್ಮೆ ಕಣ್ಣುಬಿಟ್ಟು ಬೆದರಿದ ಹರಿಣಿಯಂತೆ ನೋಡುತ್ತಿದ್ದಳು. ಮರುಕ್ಷಣವೇ ಮೂರ್ಛೆ ಬಂದು ಅವಳ ಎಚ್ಚರ ತಪ್ಪಿಸುತ್ತಿತ್ತು.

ನೂರ್ ಬೀಣಳ ಹಾಸಿಗೆ ಬಿಟ್ಟು ಕದಲುತ್ತಿರಲಿಲ್ಲ. ಅವಳ ಹಾಸಿಗೆ ಬಳಿಗೆ ಹಮೀದ ಹಾಯದಂತೆ ಎಚ್ಚರಳಾಗಿದ್ದಳು. ಏನು ಮಾಡಿದರೂ ಬೀಣಾ ಬಾಯಿಗೆ ನೀರು ಕೂಡ ಹಾಕಲಿಲ್ಲ.

ಮೂರು ದಿನ ಕಳೆದವು. ನೂರ್ ಮನಸ್ಸಿಗೆ ನಿರ್ಧಾರವಾಯಿತು.– ಇನ್ನು ಬೀಣಾ ಬದುಕುವುದಿಲ್ಲವೆಂದು! ತಾನೂ ಅನ್ನ ನೀರು ಬಿಟ್ಟು ಬೀಣಾಳನ್ನು ಅಪ್ಪಿ ಕುಳಿತುಬಿಟ್ಟಳು.

ನಾಲ್ಕನೆಯ ದಿನ ರಾತ್ರಿ. ಮೂಲೆಯಲ್ಲಿ ಒಂದು ಕಂದೀಲು ಉರಿಯು ತ್ತಿತ್ತು. ಬೀಣಳಿಗೆ ಎಚ್ಚರವಾಯಿತು. ಎದ್ದು ಕುಳಿತಳು. ಪಕ್ಕದಲ್ಲಿ ನೂರ್ ಸೋತು, ಸೊರಗಿ, ಗಾಢನಿದ್ರೆಯಲ್ಲಿದ್ದಳು. ಬೀಣಾ ಪ್ರಯಾಸದಿಂದ ಎದ್ದು ತನ್ನ ಕೋಣೆಯ ಹೊರಗೆ ನೋಡಿದಳು. ತೊಟ್ಟಿಯಲ್ಲಿ ಹಮೀದ್ ಸುಖ ನಿದ್ರೆಯಲ್ಲಿ ಪವಡಿಸಿದ್ದ. ಹಾಗೇ ನಿಂತು ಇಬ್ಬರನ್ನೂ ದಿಟ್ಟಿಸಿ ನೋಡಿದಳು. ಏನೋ ಹೊಳೆದಂತಾಯಿತು. ಮೆಲ್ಲನೆ ನೂರಳಿಗೆ ಎಚ್ಚರವಾಗದಂತೆ ಅವಳ ಮೃದುಗೆನ್ನೆಗೊಂದು ಮುದ್ದಿಟ್ಟು ಕಂದೀಲನ್ನು ಕೈಗೆ ತೆಗೆದುಕೊಂಡಳು, ಅದರ ಎಣ್ಣೆ ಡಬ್ಬ ಕಳಚಿ ಅಲ್ಲಲ್ಲಿ ಬಟ್ಟೆಗಳ ಮೇಲೆ ಸುರುವಿದಳು. ಶಬ್ದವಾ ಗದಂತೆ ಅವುಗಳಿಗೆ ಬೆಂಕಿಯಿಟ್ಟಳು. ಪಕ್ಕದಲ್ಲಿ ರಾಶಿರಾಶಿಯಾಗಿ ಬಿದ್ದಿದ್ದ ಚೂರಿ, ಮಚ್ಚುಗಳಲ್ಲಿ ಒಂದನ್ನೆತ್ತಿಕೊಂಡು ತಲೆಬಾಗಿಲ ಬಳಿಗೆ ಓಡಿ ಅದಕ್ಕ ಡ್ಡಲಾಗಿ ನಿಂತಳು.

ಬೆಂಕಿ ಸ್ವಲ್ಪ ಕಾಲದಲ್ಲಿಯೇ ತನ್ನ ವ್ಯಾಪ್ತಿಯನ್ನು ಪಸರಿಸಿತು, ಕೂಡಲೆ ನೂರ್—ಹಮೀದರಿಬ್ಬರಿಗೂ ಎಚ್ಚರವಾಯಿತು.

"ಅಯ್ಯೋ ಬೆಂಕಿ" ಎಂದು ಚೀರಿದರು.

ಬೆಂಕಿ ಪೆಟ್ರೋಲ್ ಡಬ್ಬಕ್ಕೆ ತಾಗಿತು. ಅದು ಸಿಡಿದು ಇತರ ಪೆಟ್ರೋಲ್, ಎಣ್ಣೆ ಡಬ್ಬಗಳಿಗೆ ಹಬ್ಬಿತು. ಹಮೀದ್ ತಲೆಬಾಗಿಲ ಕಡೆ ಧಾವಿಸಿದ. ಹೊಗೆ ತುಂಬಿ ಬಿಟ್ಟಿತ್ತು. ತಲೆಬಾಗಿಲನ್ನು ಅವನು ಮುಟ್ಟುವ ಹೊತ್ತಿಗೆ ಮಚ್ಚಿನ ಹೊಡೆತ ಬಿತ್ತು

"ಅಲ್ಲಾ." ಎಂದು ಚೀರಿದ.

ದಿಕ್ಕುಕಾಣದೆ ನೂರ್ ಚೀರಾಡುತ್ತಾ ಓಡಿಯಾಡತೊಡಗಿದಳು.

"ಬೀಣಾ—ಬೀಣಾ—ಸರ್ಕಾರ್—ಎಲ್ಲಿದ್ದೀರಿ."

ಹಮೀದ ಏಳಲು ಯತ್ನಿಸುತ್ತಿದ್ದ. ಅವನ ಮೇಲೆ ಮತ್ತೆ ಮಚ್ಚಿನಿಂದ ಏಟುಗಳು ಬಿದ್ದವು. ಹಮೀದ

"ನೂರ್—ನಾನು ಸತ್ತೆ—ಸತ್ತೆ—ಬೀಣಾ ಕೊಂದಳು"

ಎಂದು ಕೂಗಿದ.

ಪೆಟ್ರೋಲ್ ಡಬ್ಬಗಳು, ಸೀಮೆಯೆಣ್ಣೆ ಡಬ್ಬಗಳು ಸಿಡಿದವು. ಮನೆ, ವಸ್ತ್ರಗಳು ಎಲ್ಲಾ ಹತ್ತಿಕೊಂಡು ಉರಿಯತೊಡಗಿದವು. ಬೀಣಾ ತನ್ನ

ಸ್ಥಾನ ಬಿಡಲಿಲ್ಲ. ಕೆದರಿದ ಕೇಶರಾಶಿ—ಕೆಂಗಣ್ಣು—ಮೈಯೆಲ್ಲಾ ರಕ್ತ ಮಯ—ಕೈಯಲ್ಲಿ ರಕ್ತ ತೊಟ್ಟಿಕ್ಕುತ್ತಿದ್ದ ಮಚ್ಚು.

ಉರಿ ಮನೆಯನ್ನೆಲ್ಲಾ ವ್ಯಾಪಿಸಿತು. ಬೀಣಾ ಒಮ್ಮೆ ಕತ್ತೆತ್ತಿ ನೋಡಿ

"ಬನ್ದೇ ಮಾತರಂ"

ಎಂದಳು. ನಾಲ್ಕು ದಿವಸಕ್ಕೆ ಅವಳ ಬಾಯಿಂದ ಬಂದುದು ಅದೇ ಒಂದು ಶಬ್ದ.



# ಅ. ನ. ಕೃಷ್ಣರಾಯರ ಗ್ರಂಥಗಳು

**ಕಥೆ**

ಅಗ್ನಿಕನ್ಯೆ

ಕಣ್ಣು-ಮುಚ್ಚಾಲೆ

¶ ಪಾಪ-ಪುಣ್ಯ

¶ ಕಾಮನ ಸೋಲು

¶ ಜಾತಿಹೀನನ ಮನೆಯ ಜ್ಯೋತಿ

¶ ಕಿಡಿ

¶ ಮಿಂಚು

**ಲಲಿತ ಕಲೆ**

¶ ರಾಜಾ ರವಿವರ್ಮ

ಕರ್ನಾಟಕದ ಕಲಾವಿದರು

**ಕಾದಂಬರಿ**

ಜೀವನಯಾತ್ರೆ

ಉದಯರಾಗ

ಸಂಧ್ಯಾರಾಗ

ಮಂಗಳಸೂತ್ರ

ಸಾಹಿತ್ಯರತ್ನ

ನಟಸಾರ್ವಭೌಮ

ಕಣ್ಣೀರು

* ತಾಯಿಯ ಕರುಳು

**ಹರಟೆ**

ಪೊರಕೆ

**ಜೀವನ ಚರಿತ್ರೆ**

ಸ್ವಾಮಿ ವಿವೇಕಾನಂದ

ಬಸವಣ್ಣನವರ ಅಮೃತವಾಣಿ

* ಕೈಲಾಸಂ

**ಸಂಪಾದಿತ**

ಮರುಳಸಿದ್ಧ ಕಾವ್ಯ

**ನಾಟಕ**

¶ ಮದುವೆಯೋ ಮನೆಹಾಳೋ

¶ ಆಹುತಿ

¶ ಆದದ್ದೇನು

¶ ಎರಡು ನಾಟಕಗಳು

¶ ಬಣ್ಣದ ಬೀಸಣಿಗೆ

ರಜಪೂತ ಲಕ್ಷ್ಮಿ

ಗೋಮುಖವ್ಯಾಘ್ರ

**ಪ್ರಬಂಧ**

ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ

¶ ಹೊಸ ಹುಟ್ಟು

ಸಾಹಿತ್ಯ ಮತ್ತು ಜೀವನ

· ಕನ್ನಡದ ದಾರಿ

ಅಖಂಡ ಕರ್ನಾಟಕ

**ಸಂಕಲನ**

¶ ಪ್ರಣಯ ಗೀತೆಗಳು

¶ ರಸಋಷಿ

¶ ಕಾಮನಬಿಲ್ಲು

ಭಾರತೀಯ ಕಥಾಸಾಹಿತ್ಯ

ಪ್ರಗತಿಶೀಲ ಸಾಹಿತ್ಯ

ಮ್ಯಾಕ್ಸಿಂ ಗಾರ್ಕಿ

**ಇತರ**

ನನ್ನನ್ನು ನಾನೇ ಕಂಡೆ.

---

¶ ಪ್ರತಿಗಳು ತೀರಿವೆ.

* ಅಚ್ಚಿನಲ್ಲಿ

# ನಮ್ಮ ಮುಂದಿನ ಪ್ರಕಟಣೆಗಳು

---:---

**೧. ಕೈಲಾಸಂ:** ಶ್ರೀ ಅ. ನ. ಕೃಷ್ಣರಾಯರು

ಕೈಲಾಸಂ ಅವರ ಜೀವನ ಕಥೆಯಲ್ಲದೆ ಶಿಕ್ಷಕ, ಕಲಾವಿದ, ಹಾಸ್ಯಗಾರ, ಕಲಾವಿದ, ಸಮಾಜಸುಧಾರಕ ಕೈಲಾಸಂ ಅವರ ಬಹುಮುಖ ಪ್ರತಿಭೆಯ ವಿಮರ್ಶೆ.

—ಸುಮಾರು ೧೫೦ ಪುಟಗಳು.

**೨. ಪ್ರಕೃತಿಯ ಮಡಿಲಲ್ಲಿ:** ಶ್ರೀ ಶ್ರೀಕರ

ಮಲೆನಾಡಿನ ಕಷ್ಟಸುಖ, ಆಗುಹೋಗುಗಳನ್ನು ರಮ್ಯವಾಗಿ ನಿರೂಪಿಸುವ ಕಾದಂಬರಿ.

ಮತ್ತು

ಶ್ರೀಮತಿ ಜಯಲಕ್ಷ್ಮಮ್ಮ

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ

ಶ್ರೀ ಮತಿಘಟ್ಟ ಕೃಷ್ಣಮೂರ್ತಿ

ಇವರ ಕೃತಿಗಳು ಪ್ರಕಟವಾಗುತ್ತವೆ.

೫

**ಶಿವಮೊಗ್ಗಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿ ಲಿಮಿಟೆಡ್**

ಶಿವಮೊಗ್ಗ